

# ಸಿದ್ಧಗಂಗಾ



ನವೆಂಬರ್ ೨೦೦೧



ಸದಾಶಯ ಸಂಗಮ ಬೆಂಗಳೂರಿನಲ್ಲಿ ಆಕ್ಟೋಬರ್ ೨೧ರಂದು ಏರ್ಪಡಿಸಿದ್ದ ಸೌಹಾರ್ದ ಸಮ್ಮಿಲನ ಸಮಾರಂಭವನ್ನು ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಪರಮಪೂಜ್ಯ ಡಾ ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಸುತ್ತೂರು ಜಗದ್ಗುರುಗಳು, ಸಿರಿಗೆರೆ ಜಗದ್ಗುರುಗಳು, ಆದಿಚುಂಚನಗಿರಿ ಜಗದ್ಗುರುಗಳು, ಶ್ರೀ ಪುತ್ತಿಗೆ ಮಠದ ಶ್ರೀ ಶ್ರೀಗಳು, ಕನಕಗಿರಿ ಜೈನ ಮಠದ ಶ್ರೀ ಶ್ರೀಗಳು, ಮಾಜಿ ಉಪರಾಷ್ಟ್ರಪತಿ ಶ್ರೀ ಬಿ.ಡಿ. ಜತ್ತಿ, ಕರ್ನಾಟಕ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿ ಶ್ರೀ ಸಿ. ಸೋಮಶೇಖರ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

ಹಚ್ಚೇವು ಕನ್ನಡದ ದೀಪ
ಕರುನಾಡದೀಪ ಸಿರಿನುಡಿಯದೀಪ
ಒಲವೆತ್ತಿ ತೋರುವಾ ದೀಪ ॥ ಹಚ್ಚೇವು ॥

— ಡಿ.ಎಸ್. ಕರ್ಕಿ

## ರಾಜ್ಯೋತ್ಸವ ಸಂಚಿಕೆ

ಕನ್ನಡವನುಳಿದೆನಗೆ ! ಅನ್ಯ ಜೀವನವಿಲ್ಲ
ಕನ್ನಡವೆ ಎನ್ನುಸಿರು ! ಪೆತ್ತೆನ್ನ ತಾಯಿ
ಕನ್ನಡವೆ ಧನಧಾನ್ಯ ! ಕನ್ನಡವೆ ಮನೆಮಾನ್ಯ
ಕನ್ನಡವೆಯೆನಗಾಯ್ತು ! ಕಣ್ಣು ಕಿವಿ ಬಾಯಿ

— ಬೆನಗಲ್ ರಾಮರಾವ್




ಮುಖಪುಟ

ಬೆಂಗಳೂರಿನ ಸದಾಶಯ ಸಂಗಮ ಏರ್ಪಡಿಸಿದ್ದ ಸೌಹಾರ್ದ ಸಮ್ಮಿಲನ ಸಮಾರಂಭದ ಉದ್ಘಾಟನೆ.



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೭ ನವೆಂಬರ್ ೨೦೦೧ ಸಂಚಿಕೆ : ೧೧

## ಒಳಪುಟಗಳಲ್ಲಿ..........




ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ– ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು– ೫೪
ದೂರವಾಣಿ : ೩೬೦೪೦೬೭


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ


ವಿಳಾಸ :
''ಸಂಪಾದಕರು'', 'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಚಂದಾ ವಿವರ :

| | |
|---|---|
| ವಾರ್ಷಿಕ ಚಂದಾ | ರೂ. ೧೦೦/– |
| ಆಜೀವ ಸದಸ್ಯತ್ವ | ರೂ. ೫೦೦/– |
| ಬಿಡಿ ಪ್ರತಿ | ರೂ. ೧೦.೦೦ |



# ಇಚ್ಛಾಶಕ್ತಿಯ ಕೊರತೆ .......

ನವೆಂಬರ್ ಒಂದು ರಾಜ್ಯೋತ್ಸವ. ಕನ್ನಡ, ಕನ್ನಡ, ಕನ್ನಡ ಮಾತಿನ ಮತಾಪಿನ ಬೆಳಕು. ನವೆಂಬರ್ ಬಂತೆಂದರೆ ಕನ್ನಡಕ್ಕೆ ಮಹಾಪೂರ. ಅದೂ ಸದ್ದುಗದ್ದಲಗಳ ಡಂಗುರ. ಕೆಲವರಿಗಂತೂ ಕೆಲದಿನಗಳ ಜೀವನ ಯಾಪನೆಗೆ ಸುವರ್ಣಾವಕಾಶ. ಕನ್ನಡದ ಹೆಸರಿನಲ್ಲಿ ಪ್ರತಿಷ್ಠೆ ಬೆಳಗಿಕೊಳ್ಳುವ ಹುನ್ನಾರ. ಇನ್ನಿಲ್ಲದ ಅಭಿಮಾನದ ನಟನೆ. ಸರ್ಕಾರವನ್ನು, ಆಡಳಿತ ವ್ಯವಸ್ಥೆಯನ್ನು ದೂರುವ ಚಾಳಿ. ಕನ್ನಡ ಪ್ರಾಧಿಕಾರ, ಕನ್ನಡ ಸಾಹಿತ್ಯ ಪರಿಷತ್ತು, ವಿವಿಧ ಅಕಾಡೆಮಿಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಳು ಮಾಡುತ್ತಿರುವ ಕನ್ನಡಾಭಿವೃದ್ಧಿ ಪ್ರಯತ್ನಗಳನ್ನು ತೆರೆದ ಕಣ್ಣುಗಳಿಂದ, ಮುಕ್ತಮನಸ್ಸಿನಿಂದ ನೋಡಲಾಗದ ಮನೋಧರ್ಮ. ಅವುಗಳ ಕಾರ್ಯವಿಧಾನದಲ್ಲಿ ದೋಷಗಳನ್ನೇ ಹುಡುಕುವ ಪ್ರವೃತ್ತಿ.

ಕನ್ನಡಕ್ಕಾಗಿ ನಾವೇನು ಮಾಡಿದ್ದೇವೆ? ನಮ್ಮ ಮನೆಯಲ್ಲಿ ನಡೆಯುವ ಮದುವೆ, ನಾಮಕರಣ, ಗೃಹಪ್ರವೇಶಗಳಂತ ಮಂಗಳ ಕಾರ್ಯಕ್ರಮಗಳ ಆಹ್ವಾನ ಪತ್ರಿಕೆಗಳು ಕನ್ನಡದಲ್ಲಿರುತ್ತವೆಯೆ? ನಮ್ಮ ಅಡುಗೆ ಮನೆಗಳಲ್ಲಿ ಕನ್ನಡದ ಅಭಾವ ಎಷ್ಟಿದೆಯೆಂಬುದನ್ನು ಮನಗಂಡಿದ್ದೇವೆಯೇ? ನೆಂಟರಿಷ್ಟರ – ಬಂಧುವಾಚಕಗಳ ಪದದಾರಿದ್ರ್ಯ ನಮಗೇಕೆ ಬಡಿದಿದೆ? ನಮ್ಮ ಮಕ್ಕಳ ಬಾಯಲ್ಲಿ ಕನ್ನಡಪದಗಳ ನರ್ತನ ನಡೆದಿದೆಯೇ? ಪರಸ್ಪರ ಪರಿಚಯ ಮಾಡಿಕೊಳ್ಳುವ ಸಂದರ್ಭದಲ್ಲಿ ನಾವು ಬಳಸುವ ಅನ್ಯಭಾಷಾ ಪದಗಳೆಷ್ಟು? ಇವುಗಳಿಗೆ ಲೆಕ್ಕವಿಟ್ಟಿದ್ದೇವೆಯೇ?

ಕನ್ನಡ ಪತ್ರಿಕೋದ್ಯಮದತ್ತ ನಾವೆಂದಾದರೂ ಅಭಿಮಾನದಿಂದ ಚಿಂತಿಸಿದ್ದೇವೆಯೇ? ಕನ್ನಡ ಪುಸ್ತಕಗಳನ್ನು ಕೊಳ್ಳುವ ಜಾಯಮಾನ ನಮಗೇಕೆ ಬಂದಿಲ್ಲ? ಎಷ್ಟು ಕನ್ನಡ ಸಂಘಸಂಸ್ಥೆಗಳ ಅರಿವಿದೆ ನಮಗೆ? ಅದು ಬೇಡ. ಕನ್ನಡ ನಾಡಿನಲ್ಲಿರುವ ಜಿಲ್ಲೆ, ತಾಲ್ಲೂಕು, ಹೋಬಳಿಗಳೆಷ್ಟು ಎಂದಾದರೂ ಚಿಂತಿಸಿದ್ದೇವೆಯೇ? ಕನ್ನಡದಪರ ಚಿಂತಕರನ್ನು, ಅಪಹಾಸ್ಯಮಾಡುವ ಉತ್ಸಾಹವೀರರೆಷ್ಟು ನಮ್ಮಲ್ಲಿಲ್ಲ?

ಕನ್ನಡವನ್ನು ಕಟ್ಟಿದ, ಬೆಳೆಸಿದ, ಸಂರಕ್ಷಿಸಿದ ಪುಣ್ಯಜೀವಿಗಳ ಚರಿತ್ರೆ ನಮಗೆ ತಿಳಿದಿದೆಯೆ? ಹನ್ನೊಂದು ಜನರಾಡುವ ಕ್ರಿಕೆಟ್ ಕ್ರೀಡೆಗೆ ಹಗಲು-ಇರುಳೆನ್ನದೆ ಮುಗಿಬೀಳುವ ನಮಗೆ ಭಾಷೆ, ಅಭಿಮಾನವೆಂದರೆ ಸಮಾನ ಪ್ರೀತಿ ವಿಶ್ವಾಸಗಳೇಕೆ ಬೆಳೆದು ಬರಲಿಲ್ಲ? ಸಾರ್ವಕಾಲಿಕ ಪ್ರಸ್ತುಗಳೆನಿಸಿದ ಕನ್ನಡಕಾವ್ಯಗಳ, ಕವಿಗಳ, ಪ್ರಾಚೀನ – ಅರ್ವಾಚೀನ ಸಾಹಿತಿಗಳ ಬಗ್ಗೆ ನಮ್ಮ ಧೋರಣೆ ಏನು? ಗ್ರಾಮೀಣ ಜನತೆಯಲ್ಲಿ ಇಂದೂ ಉಳಿದಿರುವ ಕನ್ನಡ ಶಬ್ದಗಳನ್ನು ಅರ್ಥಮಾಡಿಕೊಳ್ಳುವ ಚಿಂತನೆ ನಮ್ಮದಾಗಿದೆಯೇ? ಆಡಳಿತ ಕನ್ನಡ ರಾಜ್ಯಮಟ್ಟದಲ್ಲಿ ವ್ಯಾಪಕವಾಗಿ ಬಳಕೆಯಾಗಲು ಮುನ್ನೂರಕ್ಕೂ ಹೆಚ್ಚು ಸರ್ಕಾರಿ ಆದೇಶಗಳು ಬರಲು ಕಾರಣವಾದರೂ ಏನು? ಶಿಕ್ಷಣದ ಭಾಷೆ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಯಲ್ಲಿಯೇ ನಡೆಯಲು ನಾವು ನೀಡುತ್ತಿರುವ ಸಹಕಾರವೆಷ್ಟು? ಹಳ್ಳಿಗೊಂದು, ಕೇರಿಗೊಂದು 'ಕಾನ್‌ವೆಂಟ್'ಗಳು ತಲೆಯೆತ್ತಲು ಯಾರು ಕಾರಣ? ನಮ್ಮ ಅಂಗಡಿ ಮುಂಗಟ್ಟುಗಳ ಮುಂದೆ ಕನ್ನಡದಲ್ಲಿ ನಾಮಫಲಕ ಹಾಕಲು ನಮಗೆ ಸರ್ಕಾರವೇ ಆದೇಶ ಹೊರಡಿಸಬೇಕೆ? ನಮ್ಮ ವಾಹನಗಳ ಮೇಲೆ ಹಾಕಿಸುವ ಅಂಕಿಗಳು ಕನ್ನಡದಲ್ಲಿರಲಿ ಎಂಬ ಅಭಿಮಾನ ನಮ್ಮದಾಗಿದೆಯೇ? ಐ.ಎ.ಎಸ್., ಅಧಿಕಾರಿಗಳನ್ನು, ಇತರೆ ಅಧಿಕಾರಿಗಳನ್ನು ಆಕ್ಷೇಪಿಸುವ ನಾವೆಷ್ಟು ನಮ್ಮ ದೈನಂದಿನ ಬದುಕಿನಲ್ಲಿ ಕನ್ನಡ ಬಳಸುತ್ತಿದ್ದೇವೆ?

'ತಾಳ ಮಾನ ಸರಿ ವನರಿಯೆ?' 'ಓಜೆ ಬಜಾವಣೆಯ ಲೆಕ್ಕವನರಿಯೆ? ಅಮೃತಗಣ ದೇವಗಣವನರಿಯೆ? ಆನು ಒಲಿದಂತೆ ಹಾಡುವೆ' – ಎಂದ ಬಸವಣ್ಣನವರು ಕನ್ನಡದ ಕಂಕಣ ಕಟ್ಟಿದ ಅರಿವು ನಮಗೆ ಗುರವಾದುದಿದೆಯೇ? ''ನರಕಕ್ಕಿಳಿಸಿ ನಾಲ್ಗೆ ಸೀಳ್ಸಿ ಬಾಯ್ಹೊಲಿ ಸಾಕಿದ್ರೂನು ಮೂಗ್ನಿನಲ್ ಕನ್ನಡದ ಪದವಾಡ್ತೀನಿ ನನ್ ಮನಸನ್ ನೀಕಾಣೆ'' – ಎಂಬ ರತ್ನನ ಅಭಿಮಾನ ನಮಗೇಕೆ ಬರಲಿಲ್ಲ?

ಕನ್ನಡಕ್ಕೆ ಜ್ಞಾನಪೀಠ ಪ್ರಶಸ್ತಿ ತಂದು ಕೊಟ್ಟ ಹಿರಿಯರ ಬಗ್ಗೆ ನಾವು ತಿಳಿದಿರುವುದೆಷ್ಟು? ಪ್ರಶಸ್ತಿ ಪುರಸ್ಕೃತ ಕೃತಿಗಳನ್ನು ನಾವು ಕೊಂಡಿದ್ದೇವೆಯೇ? ಓದಿದ್ದೇವೆಯೇ? ಆತ್ಮಾವಲೋಕನ ಮಾಡಿಕೊಂಡಿದ್ದಿದೆಯೇ? ಕನ್ನಡ ಬೆಳೆಯಬೇಕೆಂದರೆ ಹೇಗೆ? ಬೇರೆಯವರು ಬಂದು ಬೆಳೆಸಬೇಕೆ? ನಮ್ಮದೇನೂ ಕರ್ತವ್ಯವಿಲ್ಲವೆ? ಆ ಬಗ್ಗೆ ನಾವೆಷ್ಟು ಚಿಂತನ-ಮಂಥನ ಮಾಡಿದ್ದೇವೆ? ಕ್ರಿಯಾಶೀಲ ಹೆಜ್ಜೆಗಳನ್ನಿಟ್ಟಿದ್ದೇವೆ? ನಮ್ಮ ಇಚ್ಛಾಶಕ್ತಿ ಜಾಗೃತವಾಗಿಲ್ಲವೇಕೆ? ಯಾವ ದಾರಿದ್ರ್ಯ ನಮ್ಮನ್ನು ಅಡಸಿದೆ? ಭಾಷೆ ಬೆಳೆಯುವುದೆಂದರೆ ಏನು? ಭಾಷೆಯನ್ನಾಡುವ ಜನ ಬೆಳೆಯುವುದೆಂದರ್ಥವಲ್ಲವೆ?

ಜೈ ಭುವನೇಶ್ವರಿ? ಎಂದರೆ ಭುವನೇಶ್ವರಿಗೆ ಸಂತೋಷವಾಗುತ್ತದೆಯೆ? ಕುದುರೆಯನ್ನು ಮಾಲೀಷ್ ಮಾಡಿದರೆ ಸಾಲದು ಅದಕ್ಕೆ ಹುರಳಿ ಹುಲ್ಲು ನೀರು ಕೊಟ್ಟು ಪೋಷಣೆ ಮಾಡಿದಾಗ ಕುದುರೆಯ ಅಂದ ಚೆಂದ, ಶಕ್ತಿ ಸಾಮರ್ಥ್ಯ ಪ್ರಕಟವಾದೀತು.

– ಸಂಪಾದಕ







# ಮಾತು ಸತ್ಯ ಸುಂದರವಾಗಿರಬೇಕು

ಮಾತು ಮಿತವಾಗಿರಬೇಕು. ಹಿತವಾಗಿರಬೇಕು. ಪ್ರೀತಿಯಿಂದಿರಬೇಕು. ಅರ್ಥಪೂರ್ಣವಾಗಿರಬೇಕು. ವ್ಯರ್ಥವಾಗಿರಬಾರದು. ಮಾತು ಮನುಷ್ಯ ಸಾಧಿಸಿದ ಬಹು ದೊಡ್ಡ ಪವಾಡ. ಸೃಷ್ಟಿಯ ಅದ್ಭುತ. ಮನುಷ್ಯನ ಯೋಗ್ಯತೆಯನ್ನು ನಿರ್ಧರಿಸುವ ಅಳತೆಗೋಲು. ಶತ್ರು-ಮಿತ್ರರನ್ನು ತಂದುಕೊಡುವ ಸಂಪತ್ತು ಮಾತು. ಮೌನದಿಂದ ಹೊರಬಿದ್ದಮಾತು ಮೌನದತ್ತಲೇ ಸಾಗುವುದು ಒಂದು ವಿಸ್ಮಯ. ಮನುಷ್ಯನ ಅನುಭವಗಳನ್ನು ಮಾತಿನ ಮೂಲಕ ವ್ಯಕ್ತಪಡಿಸಿದಾಗ ಅದರಿಂದಾಗುವ ಪರಿಣಾಮವೇ ಸುಖದಾಯಕ. ಮಾತು ಸತ್ಯಸುಂದರವಾಗಿರಬೇಕು. ಜಗತ್ತಿನಲ್ಲಿ ಅರಳಿದ ಭಾಷೆಗಳಿಗೆಲ್ಲ, ಸಾಹಿತ್ಯ ಸಂಗೀತಾದಿ ಕಲೆಗಳಿಗೆಲ್ಲ, ಅಷ್ಟೇ ಏಕೆ ಜ್ಞಾನಶಾಖೆಗಳಿಗೆಲ್ಲ ಮಾತೇ ಜೀವದ್ರವ್ಯ. ಶಾಸ್ತ್ರವಾಗಿರಲಿ, ಸಾಹಿತ್ಯವಾಗಿರಲಿ ವಾಗ್ರೂಪದಲ್ಲಿಯೇ ಮೈದಳೆಯಬೇಕು.

ಮಾತಾಡುವುದು ಸುಲಭ. ಮಾತನ್ನು ಕಲಿಯುವುದು ಕಷ್ಟ. ಬಾಲ್ಯಾವಸ್ಥೆಯಿಂದ ಮರಣಾವಸ್ಥೆಯವರೆಗೆ ಆಡುವ ಮಾತುಗಳಿಗೆಲ್ಲ ಒಂದೇ ಅರ್ಥವಲ್ಲ. ವ್ಯವಹಾರದ ಮಾತು ಬೇರೆ, ಅನುಭವದ ಮಾತು ಬೇರೆ. ಆಡುನುಡಿ ಒಂದು ತೆರನಾದರೆ; ಬರವಣಿಗೆಯ ನುಡಿಯದೇ ಬೇರೊಂದು ರೂಪ. ಮಾತಿನ ಹೊಸ ಅರ್ಥ ಒಂದು ಬಗೆಯಾದರೆ ಒಳ ಅರ್ಥವೇ ಇನ್ನೊಂದು ತರ.

ಮಾತು ಮೃದುವಾಗಿರಬಲ್ಲುದು ಕಟುವಾಗಿರುವುದೂ ಉಂಟು.ಮಾತು ಮನವನ್ನು ಅರಳಿಸುವ ತಂಗಾಳಿಯೂ ಹೌದು, ಕೊಲ್ಲುವ ಕಡುಗೋಲು ಕೂಡ. ಮಾತು ತಪಸ್ಸು. ಮಾತು ಜಪ. 'ಮೃದುವಚನವೇ ತಪ, ಮೃದು ವಚನವೇ ಜಪ! ಅಷ್ಟೇ ಅಲ್ಲ ಮಾತು ಮುತ್ತೂ ಹೌದು. ಮಾಣಿಕ್ಯದ ದೀಪ್ತಿಯೂ ನಿಜ. ಮೃದು ಮಾತಿನ ಹಿಂದೆ 'ಸದುವಿನಯ'ವಿರುತ್ತದೆ. 'ಅಯ್ಯಾ' ಎಂಬುದೇ ಸ್ವರ್ಗ. 'ಎಲವೋ' ಎಂಬುದೆ ನರಕ. ಮಾತು ಮಾನವೀಯತೆಯ ಮಾಂಗಲ್ಯ, ಮನೆಯ ಬಾಗಿಲಿಗೆ ಕಟ್ಟುವ ಹಸಿರು ತೋರಣ, ಒಳಗೆ ಬೆಳಗುವ ಜ್ಯೋತಿ, 'ಏನು ಬಂದಿರಿ, ಹದುಳವಿದ್ದಿರೆ' ಎಂದು ಪ್ರೀತಿಯನ್ನು ತೋರಿಸಲಿರುವ ನುಡಿ ನೈವೇದ್ಯ. ಮಾತನ್ನು 'ಕೆರೆ, ಹಳ್ಳ, ಬಾವಿಗಳೆಂದಿದ್ದಾರೆ, ವಾರಿಧಿ ಎಂದಿದ್ದಾರೆ, ಕೊನೆಗೆ 'ಲಿಂಗ'ವೆಂದು ಭಕ್ತಿಯನ್ನು ವ್ಯಕ್ತಪಡಿಸಿದ್ದಾರೆ. ಮಾತು ಮನಕ್ಕೆ ತೆರೆದ ಕನ್ನಡಿ.

ಮಾತು ವೈಯಕ್ತಿಕ ಸಿದ್ಧಿ, ಮಾತು ಸಾಮಾಜಿಕ ಸ್ವಾಸ್ಥ್ಯಕ್ಕೆ ಹೆದ್ದಾರಿ. ಮಾತು ಆಡಿದರೆ ಹೋಯಿತು, ಮುತ್ತು ಒಡೆದರೆ ಹೋಯಿತು. ತೂಕವಾದ ಮಾತಿಗೆ ಎಲ್ಲೆಲ್ಲೂ ಗೌರವ ಮನ್ನಣೆ. ಹತ್ತು ಕಟ್ಟುವ ಕಡೆಗೆ ಒಂದು ಮುತ್ತು ಕಟ್ಟು ಎಂಬಂತಿದ್ದಾಗ ಮಾತಿಗೆ ಬೆಲೆ, ಮರ್ಯಾದೆ. ಮಾತು ಅನುಭವದ ಅನುಯಾಯಿ. ಅನುಭವದ ಹಿಂದೆ ಬಿದ್ದಾಗ ಮಾತಿಗೊಂದು ಮಹತ್ವ, ಸಾವಿರ ಮಾತಿಗಿಂತ 'ಸಾವಿರದ' ಮಾತು ಒಳ್ಳೆಯದು. ಮಾತು ಶೀಲದಿಂದ ಸಂಸ್ಕಾರ ಪಡೆಯುತ್ತದೆ. ಮಾತು-ಮನ-ಮೈಗಳ ಮುಪ್ಪುರಿ ವ್ಯಕ್ತಿತ್ವದ ಮುಕುಟವಾಗುತ್ತದೆ. ಇಲ್ಲದೇ ಹೋದರೆ ಮಾತಿನಂತೆ ಮನವಿಲ್ಲದಾದರೆ ಮಾತು ಕುಂಭದಲ್ಲಿ ನೀರು ತುಂಬಿದಂತಾಗುತ್ತದೆ.

ಮಾತು ಮನಕ್ಕೆ, ಮನಮಾತಿಗೆ ಬಿಂಬ ಪ್ರತಿಬಿಂಬಗಳು, ಮಾತು ಮೃತ್ಯುವಾಗಬಹುದು, ಮಾತು ಮರ್ತ್ಯವನ್ನು ಗೆಲ್ಲುವ ಮೆಟ್ಟಿಲಾಗಬಹುದು. ಮಾತು ಮನುಷ್ಯವೃಕ್ಷದಲ್ಲರಳಿದ ಸುಂದರಹೂವು, ರಸಭರಿತ ಹಣ್ಣು.

(೮-೧೦-೨೦೦೧ರ ಪ್ರಾರ್ಥನಾ ಸಭೆಯಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ) *

ॐ



# ಶ್ರೀ ಸಿದ್ಧಲಿಂಗೇಶ್ವರ ವಚನ

*ಕರ್ಕಶನ ಕಂಗಳೊಳಗೆ ರಾಕ್ಷಸರ ಪಡೆಯಿರ್ಪುದ ಕಂಡೆನಯ್ಯಾ*
*ರಾಕ್ಷಸರ ಪಡೆಯೊಳಗೆ ಮುಕ್ಕಣ್ಣನುದಯವಾಗಲು*
*ಕರ್ಕಶನ ಕಂಗಳು ಕೆಟ್ಟು*
*ರಾಕ್ಷಸರ ಪಡೆ ಮುರಿದೋಡಿತ್ತು ನೋಡಾ!*
*ಮುಕ್ಕಣ್ಣ ಶಿವನೊಲಹ ನಾನೇನೆಂಬೆನಯ್ಯಾ*
*ಮಹಾಲಿಂಗ ಗುರು ಶಿವ ಸಿದ್ದೇಶ್ವರ ಪ್ರಭುವೇ!*

ಪ್ರಾಪಂಚಿಕ ಜೀವಿಯ ಜೀವನ ಲೌಕಿಕ ಜ್ಞಾನ ದೃಷ್ಟಿಯುಳ್ಳದ್ದು. ಅವನ ಸಕಲ ಕರಣಗಳ ವ್ಯವಹಾರ ಭಿನ್ನಜ್ಞಾನದಿಂದೊಡಗೂಡಿದುದು. ಸುಜ್ಞಾನಿಯಾದ ಶರಣನು ಜ್ಞಾನದೃಷ್ಟಿಯುಳ್ಳವನು. ಅಂತಹ ಶರಣನ ಸಕಲಕರಣೇಂದ್ರಿಯ ಗಳಲ್ಲಿ ಶಿವಜ್ಞಾನ ಉದಯವಾದಾಗ ಪ್ರಾಪಂಚಿಕ ದೃಷ್ಟಿನಷ್ಟವಾಗಿ, ಸಕಲ ಕರಣಗಳ ಲೌಕಿಕ ವ್ಯಾಪಾರ ನಿವೃತ್ತಿಯಾಗಿ ಲಿಂಗದಲ್ಲಿ ಏಕಾರ್ಥನಾಗುತ್ತಾನೆ. ಅಂತಹ ಶರಣ ಉಪಮಾತೀತನೆನಿಸುತ್ತಾನೆ. ಕರ್ಕಶನೆಂದರೆ ಲೋಕದೃಷ್ಟಿಯುಳ್ಳವ. ರಾಕ್ಷಸರ ಪಡೆಯೆಂದರೆ ಕರುಣಾದಿಗಳು. ಮುಕ್ಕಣ್ಣನುದಯವೆಂದರೆ ಶಿವಜ್ಞಾನಾಂಕುರ. ಮುರಿದೋಡಿತ್ತೆಂದರೆ ನಾಶವಾಯಿತೆಂದರ್ಥ.

(ಕೃಪೆ : ಷಟ್‌ಸ್ಥಲ ಜ್ಞಾನಸಾರಾಮೃತ–
ಶ್ರೀ ತೋಂ.ಸಿ.ಕೈಂ.ಸೇ. ಸಂಘ, ಎಡೆಯೂರು–ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ನೆಲದ ಅಚ್ಚರಿ ಸಿರಿಯೆ ಜಲದ ನಿರ್ಮಳ ಉರಿಯೆ
ಸಕಲ ಸಂಯೋಗದ ಶ್ರೀಗಿರಿಯೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಕಲಗುಣ ಶಾಂತನೆ ನಿಖಿಲ ನಿಜಾನಂದ
ಅಖಿಲ ಪರಿಪೂರ್ಣ ಶಿವಯೋಗಿ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸೃಷ್ಟಿ ಶ್ರೀಮಂಗಳವೆ ಅಷ್ಟಾಷಷ್ಟಿಶ್ರೀಯೆ
ಇಷ್ಟಲಿಂಗವಾದ ಶ್ರೇಷ್ಠವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶರಣ ಚರಿತಾಮೃತನೆ ಶಿವಕಿರಣ ಸಾಸಿರನೆ
ಕರುಣಾಸಾಗರನೆ ನಿರ್ಮಲನೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯಕ ಕಾಂಚನಗಂಗಾ ದಾಸೋಹ ಧವಳಗಿರಿ
ಮಾನವ್ಯ ಮಂಗಳದ ಶಿವಮೇರು। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗಲೀಲಾ ಪ್ರಭುವೆ ಜಂಗಮ ನಿರಂಜನವೆ
ವೀರವೈರಾಗ್ಯದ ಶಿವಧ್ವಜವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಗವಸುತ್ತುವೆ ನೀನು ನಿನ್ನ ಸುತ್ತುವೆ ನಾನು
ಜಗಭರಿತ ಜಂಗಮವೆ ಪೊರೆನೀನು। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬೆಳಗಿನ ಬೆಳಗಾಗಿರುವೆ ಬೆಳಗಿನ ದೊರೆಯಾಗಿರುವೆ
ಬೆಳಗಿನ ಲೋಕದ ಬೆಡಗಾದೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಶಾರಾಹಿತ್ಯವೆ ತೋಷಪಾವಿತ್ರ್ಯವೆ
ಈಶ ಚಾರಿತ್ರ್ಯವೆ ಶ್ರೀವಿಭುವೆ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನ ಮನದಂಗಳವೆ ವಾರಣಾಸಿ ಗುರುವೆ
ನಿನ್ನ ಶ್ರೀಪಾದವೆ ಜಯಕಾಶಿ। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ಹಚ್ಚೇವು ಕನ್ನಡದ ದೀಪ

ಹಚ್ಚೇವು ಕನ್ನಡದ ದೀಪ
ಕರುನಾಡದೀಪ ಸಿರಿನುಡಿಯದೀಪ
ಒಲವೆತ್ತಿ ತೋರುವಾ ದೀಪ ॥ ಹಚ್ಚೇವು ॥

ಬಹುದಿನಗಳಿಂದ ಮೈಮರವೆಯಿಂದ
ಕೂಡಿರುವ ಕೊಳೆಯ ಕೊಚ್ಚೇವು
ಎಲ್ಲೆಲ್ಲಿ ಕನ್ನಡದ ಕಂಪು ಸೂಸ-
ಲಲ್ಲಲ್ಲಿ ಕರಣ ಚಾಚೇವು
ನಡು ನಾಡೆ ಇರಲಿ, ಗಡಿನಾಡೆ ಇರಲಿ
ಕನ್ನಡದ ಕಳೆಯ ಕೆಚ್ಚೇವು
ಮರತೇವು ಮರವ, ತೆರೆದೇವು ಮನವ, ಎರೆದೇವು ಒಲವ-ಹಿಡಿ ನೆನಪ
ನರನರವನೆಲ್ಲ ಹುರಿಗೊಳಿಸಿ ಹೊಸೆದು ಹಚ್ಚೇವು ಕನ್ನಡದ ದೀಪ

ಕಲ್ಪನೆಯ ಕಣ್ಣು ಹರಿವನಕ ಸಾಲು
ದೀಪಗಳ ಬೆಳಕ ಬೀರೇವು
ಹಚ್ಚಿರುವ ದೀಪದಲಿ ತಾಯ ರೂಪ
ಅಚ್ಚಳಿಯದಂತೆ ತೋರೇವು
ಒಡಲೊಡಲ ಕೆಚ್ಚಿನಾ ಕಿಡಿಗಳನ್ನು
ಗಡಿನಾಡೆಚೆ ತೂರೇವು
ಹೊಮ್ಮಿರಲು ಪ್ರೀತಿ ಎಲ್ಲಿಯದು ಭೀತಿ? – ನಾಡೊಲವೆ ನೀತಿ ಹಿಡಿ ನೆನಪ
ಮನೆಮನೆಗಳಲ್ಲಿ ಮನಮನಗಳಲ್ಲಿ ಹಚ್ಚೇವು ಕನ್ನಡದ ದೀಪ.

ಕರುನಾಡಿನೆರಿವ ನೆರೆತೀವಿ ಭಾವ
ದಲಿ ಜೀವನಾಡಿ ನುಡಿಸೇವು
ತೆರೆತೆರೆದ ಕಣ್ಣಿನಲಿ ನೇಹವೆರೆದು
ನವ ಜ್ಯೋತಿಯನ್ನೆ ಮುಡಿಸೇವು
ನಮ್ಮನ್ನಂವುಂಡು ಅನ್ಯಾಯಗೈಯು
ವಂಥವರ ಹುಚ್ಚ ಬಿಡಿಸೇವು
ಇಹುದೆಮಗೆ ಛಲವು, ಕನ್ನಡದ ಬಲವು ಕನ್ನಡದ ಒಲವು ಹಿಡಿನೆನಪು
ನಮ್ಮೆದೆಯ ಕೆಚ್ಚುನೆಚ್ಚುಗಳನೂಡಿ ಹಚ್ಚೇವು ಕನ್ನಡದ ದೀಪ.

ನಮ್ಮವರು ಗಳಿಸಿದಾ ಹೆಸರ ಉಳಿಸ-
ಲೆಲ್ಲಾರು ಒಂದುಗೂಡೇವು
ನಮ್ಮೆದೆಯ ಮಿಡಿಯುವೀ ಮಾತಿನಲ್ಲಿ
ಮಾತೆಯನು ಪೂಜೆ ಮಾಡೇವು
ನಮ್ಮುಸಿರು ತೀಡುವೀ ನಾಡಿನಲ್ಲಿ
ಮಾಂಗಲ್ಯಗೀತ ಹಾಡೇವು
ತೊರೆದೇವು ಮರುಳ, ಕಡೆದೇವು ಇರುಳ ಪಡೆದೇವು ತಿರುಳ ಹಿಡಿನೆನಪ
ಕರುಳೆಂಬ ಕುಡಿಗೆ ಮಿಂಚನ್ನೆ ಮುಡಿಸಿ ಹಚ್ಚೇವು ಕನ್ನಡದ ದೀಪ.

– ಡಿ.ಎಸ್. ಕರ್ಕಿ

# ಕನ್ನಡ ಭಾಷೆ : ಒಂದು ಚಿಂತನೆ

''ತಂತಮ್ಮ ಭಾಷೆಯ ವಿಷಯದಲ್ಲಿ ನಿರಭಿಮಾನವೂ ಸಲ್ಲದು. ದುರಭಿಮಾನವೂ ಸಲ್ಲದು. ಸದಭಿಮಾನವಿರಬೇಕು... ಕನ್ನಡ ಕುಲ, ಕನ್ನಡ ಕುಟುಂಬ ಎಂಬ ಸದಭಿಮಾನವೇ ನಮ್ಮನ್ನು ಕೂಡಿಸಬಲ್ಲದು .... ಕನ್ನಡಿಗರು ಬೇರೆ ಭಾಷೆಗಳನ್ನು ಕಲಿಯಬಹುದು. ಮೆಚ್ಚಬಹುದು, ಆದರೆ ಕನ್ನಡದಲ್ಲಿಯೇ ಆಡಳಿತದ ವ್ಯವಹಾರಗಳು, ವಿಧಾನಸಭೆಯ ಮತ್ತು ನ್ಯಾಯಾಲಯದ ಕಾರ್ಯಕಲಾಪಗಳು, ವಿಶ್ವವಿದ್ಯಾಲಯದ ಪಾಠ ಪ್ರವಚನಗಳು ನಡೆಯುವುದಾದರೆ ಮಾತ್ರ ಬಹುಸಂಖ್ಯೆ ಕನ್ನಡಿಗರು ರಾಜ್ಯ ಕಾರಭಾರದಲ್ಲಿ ತಂತಮ್ಮ ಪಾತ್ರವನ್ನು ವಹಿಸಬಲ್ಲವರಾಗುತ್ತಾರೆ .... ಹೆಚ್ಚು ಹೆಚ್ಚಾದ ಕನ್ನಡ ಜನ ಉಚ್ಚವಾದ ಜ್ಞಾನವನ್ನೂ, ತಿಳುವಳಿಕೆಯನ್ನೂ ಪಡೆಯಬೇಕೆಂಬುದು, ಶಿಕ್ಷಣ ಮಾಧ್ಯಮವು ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡವಾಗದೆ ಇದು ಸಾಧ್ಯವಿಲ್ಲ ... ಶುಚಿಯಾದ, ರುಚಿಯಾದ ಕನ್ನಡವು ನಮ್ಮ ನಾಲಗೆಯ ಮೇಲೆ ಯಾವಾಗಲೂ ನಲಿದಾಡಬೇಕು ... ಈ ದೃಷ್ಟಿಯಿಂದ ಕನ್ನಡ ವಾಚಕರು ತಮ್ಮ ಕೌಟುಂಬಿಕ ಅರ್ಥವ್ಯವಸ್ಥೆಯಲ್ಲಿ ಸಾಹಿತ್ಯ ಸಂಗ್ರಹಕ್ಕೆಂದು ಪ್ರತ್ಯೇಕವಾಗಿ ಹಣವಿರಿಸಿ ಒಳ್ಳೆಯ ಪುಸ್ತಕಗಳನ್ನು ಹೆಚ್ಚು ಹೆಚ್ಚಾಗಿ ಕೊಂಡು, ಸಾಹಿತ್ಯೋಪಾಸಕರ ಉದರ ನಿರ್ವಾಹಕ್ಕೆ ನೆರವಾಗಬೇಕು.......''

– ಡಾ. ರಂ. ಶ್ರೀ. ಮುಗಳಿ
೧೯೬೩ರಲ್ಲಿ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆದ ೪೫ನೆಯ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರು

*''ಕನ್ನಡಿಗರಲ್ಲಿಯೇ ಕೆಲವರು ಕನ್ನಡಕ್ಕೆ ಎರವಾಗುತ್ತಿದ್ದಾರೆ ... ವಾಣಿಜ್ಯ ಉದ್ಯಮಗಳು ಕನ್ನಡಗರ ಕೈಗಳಲ್ಲಿ ಉಳಿದಿದ್ದರೆ ತಾನೆ ಅಲ್ಲಿ ಕನ್ನಡ ಉಳಿಯುವುದು? ಕನ್ನಡದ ಬಗ್ಗೆ ನಮ್ಮ ಶಾಸನಕಾರರಿಗೆ ತುಸು ಬಿಸಿಯಾಗಿ ಬರೆದರು ಅದು ಹಕ್ಕು ಚ್ಯುತಿಯೆನ್ನುವ ಪರಿಸ್ಥಿತಿಯಲ್ಲಿಂದು ನಾವಿದ್ದೇವೆ..... ಕನ್ನಡಿಗರ ರಾಜಧಾನಿಯಲ್ಲಿ ಕನ್ನಡೇತರರ ಮೇಜವಾನಿ ನಡೆದಿದೆ .... ಕನ್ನಡ ಆಡಳಿತದ ಕನ್ನಡೀಕರಣವನ್ನು ಕಟ್ಟುನಿಟ್ಟಾಗಿ ಸಾಧಿಸಿ, ಲೋಕಸೇವಾ ಆಯೋಗದ ಮೂಲಕ, ವಿವಿಧ ನೇಮಕಾತಿ ಸಮಿತಿಗಳ ಮೂಲಕ ಕನ್ನಡ ಕಲಿತವರು ಮಾತ್ರ ಆಡಳಿತರಂಗ ಪ್ರವೇಶಿಸುವಂತೆ ಸೂಕ್ತ ವ್ಯವಸ್ಥೆ ಮಾಡಬೇಕು .... ಅತ್ಯಗತ್ಯವಾದ ಕಾರ್ಯಕ್ಕೆ ಕನ್ನಡ ವಿಶ್ವವಿದ್ಯಾನಿಲಯವು ಕೇಂದ್ರವಾಗಬೇಕು .... ಶೈಕ್ಷಣಿಕ ರಂಗದಲ್ಲಿ ಹೊಸ ವಿಷಮತೆಗಳನ್ನು ಹುಟ್ಟು ಹಾಕಿರುವ ಕೇಂದ್ರ ಸರ್ಕಾರದ ಮಾದರಿ ಶಾಲೆಗಳ ಯೋಜನೆಯನ್ನು ವಿರೋಧಿಸಬೇಕು; ಮತ್ತು ಇನ್ನು ಮುಂದೆ ಒಂದೇ ಒಂದು ಇಂಗ್ಲಿಷ್ ಮಾಧ್ಯಮದ ಶಾಲೆಗೂ ಅನುಮತಿ ನೀಡಕೂಡದು ... ಈ ನಾಡಿನಲ್ಲಿ ಎಲ್ಲ ಜಲಾಶಯಗಳಿಗೆ, ಹೊಸ ವಿಶ್ವವಿದ್ಯಾಲಯಗಳಿಗೆ, ಮಹಾ ನಗರಗಳಿಗೆ, ಮುಖ್ಯ ನಗರಗಳು ಮೊದಲ್ಗೊಂಡು ಹಳ್ಳಿಹಳ್ಳಿಗಳ ಹಾದಿ ಬೀದಿಗಳಿಗೆ ಕನ್ನಡ ನಾಡಿನ ಮಹಾಪುರುಷರ, ಮಹಾ ಮಹಿಳೆಯರ ಹೆಸರುಗಳನ್ನಿಟ್ಟು, ಈ ನಾಡಿನಲ್ಲೆಲ್ಲ ಕನ್ನಡ ವಾತಾವರಣ ಹುಟ್ಟುವಂತೆ ಮಾಡಬೇಕು. ತನ್ಮೂಲಕ ಕನ್ನಡಿಗರಲ್ಲಿ ಪ್ರಜ್ಞೆ, ಕನ್ನಡ ಶೀಲ, ಕನ್ನಡ ಸ್ವಭಾವ ಕೊನರಿ ಕುಸುಮಿಸುವಂತೆ ಮಾಡಬೇಕು .... ಯಾವುದೇ ಪಕ್ಷದ ಯಾವುದೇ ಹುರಿಯಾಳುವೂ ಆರಿಸಿ ಬರಲು ಕನ್ನಡ ನಿಷ್ಠೆ, ಕನ್ನಡ ಸೇವೆ, ಕನ್ನಡಿಗರ ಸೇವೆ ಅತ್ಯಗತ್ಯವಾಗುವಂತೆ, ಏಕೈಕ ಅರ್ಹತೆಯಾಗುವಂತೆ ಜಾಗೃತ ಕನ್ನಡಿಗರು ಕನ್ನಡ ಪರಿಸರವನ್ನು ನಿರ್ಮಿಸಬೇಕು .... ಈಗ ಬೇಕಾಗಿರುವುದು ಕನ್ನಡಕ್ಕಾಗಿ ಕೊನೆಯ ಹೋರಾಟ: ಅದಕ್ಕೆ ಬೇಕಾಗಿರುವುದು ಕನ್ನಡ ಹೋರಾಟಗಾರರ ಒಕ್ಕೂಟ .... ಕನ್ನಡ ತಾಯಿಯ ಕರುಳಿನ ಕುಡಿಗಳ, ಕೈಯಿಟ್ಟಲ್ಲಿ ಕನ್ನಡದ ಕೆಲಸ ಕಾದು ಕುಳಿತಿದೆ. ನಿಮ್ಮನ್ನು ಕೈ ಮಾಡಿ ಕರೆಯುತ್ತಿದೆ. ಅದರ ಕರೆಗೆ ಕಿವುಡಾಗದಿರಿ .... ಕನ್ನಡದ ತಾಯಿಯ ಊಳಿಗಕ್ಕೆ ಓಡಿ ಬನ್ನಿರಿ ....''*

– ಡಾ. ಸಿದ್ಧಯ್ಯ ಪುರಾಣಿಕ
೧೯೮೭ರಲ್ಲಿ ಗುಲಬರ್ಗಾದಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರು







# ಭಾಷಾಭಿಮಾನ

– ಪ್ರೊ. ಡಿ. ಲಿಂಗಯ್ಯ
೬೯೦, ೭ನೇ ಬ್ಲಾಕ್, ೭ನೇ ಫೇಸ್
ಬನಶಂಕರಿ ೩ನೇ ಹಂತ, ಬೆಂಗಳೂರು – ೮೫.

ನಮ್ಮ ರಾಜ್ಯ ಕರ್ನಾಟಕ. ನಮ್ಮ ರಾಜ್ಯ ಭಾಷೆ, ಆಡಳಿತ ಭಾಷೆ, ಅಧಿಕೃತ ಭಾಷೆ, ಸಾರ್ವಭೌಮ ಭಾಷೆ ಕನ್ನಡ. ಕರ್ನಾಟಕದ ಎಲ್ಲಾ ಹಂತದ ವ್ಯವಹಾರವೂ ಕನ್ನಡ ಭಾಷೆಯಲ್ಲಿ ನಡೆಯಬೇಕೆಂಬುದು ಅಪೇಕ್ಷಣೀಯ. ಕೇವಲ ಸರಕಾರದ ಘೋಷಣೆಯಿಂದ, ಯಾವುದೇ ಭಾಷೆ ಅಧಿಕೃತ ಭಾಷೆಯಾಗಲಾರದು. ಅದು ಜನರ ಬಳಕೆಯಿಂದ ಮಾತ್ರ ಅಧಿಕೃತ ಭಾಷೆಯಾಗುತ್ತದೆ. ನಮ್ಮ ಸರಕಾರ ಕನ್ನಡ ಭಾಷೆಯನ್ನು ಆಡಳಿತ ಭಾಷೆಯೆಂದು ಘೋಷಿಸಿದೆ. ಆದರೆ ಅದು ಸಂಪೂರ್ಣವಾಗಿ ಜಾರಿಯಾಗುತ್ತಿಲ್ಲ ಎಂದು ಪರಿಶೀಲನೆಯಿಂದ ತಿಳಿದುಬಂದಿದೆ. ಹೀಗೇಕೆ? ಇದಕ್ಕೆ ಯಾರು ಕಾರಣ? ಭಾರತ ಒಕ್ಕೂಟ ಭಾಷಾವಾರು ಪ್ರಾಂತ ರಚನೆಯನ್ನು ಒಪ್ಪಿಕೊಂಡಿದೆ. ಇತರ ರಾಜ್ಯಗಳಲ್ಲಿ ಇಲ್ಲದ ಭಾಷಾ ಬಿಕ್ಕಟ್ಟು ಕರ್ನಾಟಕದಲ್ಲಿ ಮಾತ್ರ ಏಕೆ ಬಿಗಡಾಯಿಸಿದೆ? ಇತರ ರಾಜ್ಯಗಳಲ್ಲಿ ವಾಸಿಸುವ ಬಹುಭಾಷಿಕರ ಭಾಷಾನೀತಿ, ಕರ್ನಾಟಕದಲ್ಲಿ ವಾಸಿಸುವ ಬಹುಭಾಷಿಕರಿಗೆ ಏಕೆ ಅರ್ಥವಾಗುವುದಿಲ್ಲ? ಕನ್ನಡಿಗರ ಮೃದುತನವನ್ನು ವಲಸೆಗಾರರು ಏಕೆ ದುರುಪಯೋಗ ಪಡಿಸಿಕೊಳ್ಳುತ್ತಾರೆ? ಕರ್ನಾಟಕದಲ್ಲಿ ವಾಸಿಸುವ ಎಲ್ಲರಿಗೂ ಕನ್ನಡ ಭಾಷೆಯ ಅಗತ್ಯವಿಲ್ಲವೆ? ಭಾಷೆಯನ್ನು ಪರಸ್ಪರ ಪ್ರೀತಿ, ಸೌಹಾರ್ದಕ್ಕೆ ಬಳಸಿಕೊಳ್ಳಲು ಸಾಧ್ಯವಿಲ್ಲವೆ? ಜನಸೇವೆಯನ್ನು ಮಾಡಬಯಸುವವರು ಜನರ ಭಾಷೆಯನ್ನು ತಿಳಿದಿರಬೇಕಲ್ಲವೆ? ಜನರೊಡನೆ ಬದುಕಬೇಕಾದವರು ಜನರ ಭಾಷೆಯಲ್ಲಿ ವ್ಯವಹರಿಸಬೇಡವೆ? – ಈ ಮೊದಲಾದ ಪ್ರಶ್ನೆಗಳ ಬಗೆಗೆ ಗಮನಹರಿಸುವುದು ಅಗತ್ಯವಾಗಿದೆ.

ನಮ್ಮ ಗ್ರಾಮಾಂತರ ಪ್ರದೇಶಗಳಲ್ಲಿ ಕನ್ನಡ ಭಾಷಾಭಿಮಾನಕ್ಕೆ ಕೊರತೆಯಿಲ್ಲ. ಹಳ್ಳಿಗರು ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳಿಗೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾರೆ; ದಿನನಿತ್ಯದ ವ್ಯವಹಾರಗಳಲ್ಲಿ ಕನ್ನಡ ಭಾಷೆಯನ್ನು ಬಳಸುತ್ತಾರೆ. ಇದು ಸಂತೋಷದ ವಿಷಯ. ಆದರೆ ಬೆಂಗಳೂರಿನಂತಹ ದೊಡ್ಡ ನಗರಗಳಲ್ಲಿ ಕನ್ನಡ ಭಾಷಾಭಿಮಾನದ ಕೊರತೆಯಿದೆ; ಕನ್ನಡದ ಬಳಕೆ ಕಡಿಮೆಯಾಗುತ್ತಿದೆ. ಕರ್ನಾಟಕದಲ್ಲಿ ನೆಲೆಸಿರುವ ಅನ್ಯಭಾಷಿಕ ವಲಸೆಗಾರರು, ನೌಕರಿಗಾಗಿ ಬಂದಿರುವ ಉನ್ನತ ಅಧಿಕಾರಿಗಳು, ಕನ್ನಡ ಭಾಷೆಯ ಬಳಕೆಗೆ ಸಹಕರಿಸುತ್ತಿಲ್ಲ ಎಂಬ ಆರೋಪವಿದೆ. ಕಾರಣಾಂತರಗಳಿಂದ ಹುಟ್ಟು ಕನ್ನಡಿಗರಲ್ಲೂ ಭಾಷಾಭಿಮಾನ ಕುಗ್ಗುತ್ತಿದೆ. ಇದರಿಂದ ಕನ್ನಡಿಗರ, ಕನ್ನಡತನದ ವರ್ಚಸ್ಸು ಕಡಿಮೆಯಾಗುತ್ತಿದೆ.

ಕನ್ನಡ ಭಾಷೆ ಶ್ರೀಮಂತವಾಗಿದೆ. ಕನ್ನಡ ಭಾಷೆಯ ಶಬ್ದ ಸಂಪತ್ತು ಹೇರಳವಾಗಿದೆ. ಯಾವುದೇ ವಿಷಯದ ಅಭಿವ್ಯಕ್ತಿಗೆ, ನಿರರ್ಗಳ ಸಂಭಾಷಣೆಗೆ ಕನ್ನಡ ಭಾಷೆ ಶಕ್ತವಾಗಿದೆ. ಸಾವಿರಾರು ವರ್ಷಗಳಿಂದ, ಕನ್ನಡ ನಾಡಿನ ಮನೆ ಮನಗಳಲ್ಲಿ ವಿಜೃಂಭಿಸಿದ ಕನ್ನಡಭಾಷೆ ಎಲ್ಲರ ಕಲಿಕೆಗೆ, ಬಳಕೆಗೆ, ಬದುಕಿಗೆ ಅರ್ಹವಾಗಿದೆ. ಕರ್ನಾಟಕದ ಜನಸಂಖ್ಯೆ ಐದುಕೋಟಿ ದಾಟಿದೆ. ಆದರೆ ಕನ್ನಡ ಭಾಷಿಕರ ಸಂಖ್ಯೆ ಐದು ಕೋಟಿಯಾಗಿಲ್ಲ. ಯಾರೇ ಆಗಲಿ, ಎಲ್ಲೇ ಆಗಲಿ ಪ್ರಾದೇಶಿಕ ಭಾಷೆಯನ್ನು ಒಪ್ಪಿ ಅಪ್ಪಿಕೊಳ್ಳದೆ, ಕಲಿತು ಬಳಸದೆ, ಬದುಕ ಬಯಸುವುದು ಆತ್ಮವಂಚನೆಯಾಗುತ್ತದೆ; ಭಾಷಾವಾರು ಪ್ರಾಂತರಚನೆಯ ಉದ್ದೇಶವನ್ನು ತಿರಸ್ಕರಿದಂತಾಗುತ್ತದೆ. ಬದುಕಿನ ನೆಲೆಯನ್ನು ಅರಸಿಕೊಂಡು ಬಂದು, ಕನ್ನಡ ನೆಲದಲ್ಲಿ ವಾಸಿಸುವ ಪ್ರತಿಯೊಬ್ಬರೂ ಕನ್ನಡ ಭಾಷೆಯನ್ನು ಕಲಿತುಕೊಳ್ಳಬೇಕು, ಯಥೋಚಿತವಾಗಿ ಬಳಸಬೇಕು, ಕನ್ನಡಿಗರೊಡನೆ ಬೆರೆಯಬೇಕು, ಕನ್ನಡ ಸಂಸ್ಕೃತಿಯ ಮುಖ್ಯವಾಹಿನಿಯ ದನಿಯಾಗಬೇಕು. ಪ್ರಾದೇಶಿಕ ಭಾಷೆಯ ಅರಿವಿನಿಂದ ಭ್ರಾತೃತ್ವ ಬೆಳೆಯುತ್ತದೆ, ಸದ್ಭಾವನೆ ವೃದ್ಧಿಸುತ್ತದೆ, ಬದುಕು ಹಸನಾಗುತ್ತದೆ. ಕನ್ನಡ ಭಾಷೆ ಸಮಸ್ತ ಕರ್ನಾಟಕ ವಾಸಿಗಳ ಸಂಗಾತಿಯಬೇಕು, ಇಹಪರಗಳ ಸಂಜೀವಿನಿಯಾಗಬೇಕು. ದೊಡ್ಡ ಪ್ರಜಾಪ್ರಭುತ್ವ ದೇಶವಾದ ಭಾರತದಲ್ಲಿ

ಯಾರು ಎಲ್ಲಿ ಬೇಕಾದರೂ ವಾಸಿಸಬಹುದು. ಆದರೆ ಎಲ್ಲರೂ ಪ್ರಾದೇಶಿಕ ಭಾಷೆಗೆ ನಿಷ್ಠರಾಗಿರಬೇಕು. ಆಗ ಯಾವ ಘರ್ಷಣೆಯೂ ಇಲ್ಲದೆ, ಪ್ರತಿಯೊಬ್ಬರೂ ನೆಮ್ಮದಿಯಾಗಿ ಬದುಕಬಹುದು.

ಕರ್ನಾಟಕ ವಾಸಿಗಳು ಕನ್ನಡ ಭಾಷೆಯನ್ನು ಕಲಿಯಬೇಕು ಎಂದರೆ, ಇತರ ಭಾಷೆಗಳನ್ನು ತಿರಸ್ಕರಿಸಬೇಕು ಎಂದು ಅರ್ಥವಲ್ಲ, ಕರ್ನಾಟಕದಲ್ಲಿ ಕನ್ನಡ ಕಡ್ಡಾಯ, ಇತರ ಭಾಷೆಗಳು ಐಚ್ಛಿಕ. ಭಾರತದ ಇತರ ರಾಜ್ಯಗಳಲ್ಲಿರುವವರಂತೆ, ಕರ್ನಾಟಕ ವಾಸಿಗಳೂ ಕೂಡ ಪ್ರಾದೇಶಿಕ ಭಾಷೆಯನ್ನು ಕಲಿಯಬೇಕು, ಬಳಸಬೇಕು. ಅಗತ್ಯಕ್ಕೆ ತಕ್ಕಂತೆ ಇತರ ಭಾಷೆಗಳನ್ನು ಪರಿಚಯ ಮಾಡಿಕೊಳ್ಳಬೇಕು. ಕನ್ನಡವನ್ನು ಕಲಿಯದೆ, ಬಳಸದೆ ಕರ್ನಾಟಕದಲ್ಲಿ ಬದುಕಲು ಬಯಸುವುದು ತಪ್ಪು. ಕನ್ನಡಿಗರು ಅನ್ಯಧರ್ಮ, ಭಾಷೆ, ಸಂಸ್ಕೃತಿಯ ಸಹಿಷ್ಣುಗಳಾಗಿದ್ದಾರೆ. ಇತರರೂ ಹಾಗೇ ಇರಬೇಕೆಂದು ಬಯಸುತ್ತಾರೆ. ಆದ್ದರಿಂದ ಕರ್ನಾಟಕದ ಎಲ್ಲರ ಮನದಲ್ಲಿ ಕನ್ನಡ ನೆಲೆಸಬೇಕು; ಎಲ್ಲರ ಮನೆಯಲ್ಲಿ ಕನ್ನಡ ಮೊಳಗಬೇಕು.

ವ್ಯಾವಹಾರಿಕವಾಗಿ ಮಾತಾಡುವ ಕನ್ನಡ ಭಾಷೆಯನ್ನು ಕಲಿಯುವುದು ಕಷ್ಟವಲ್ಲ, ಕೆಲವೇ ವಾರಗಳಲ್ಲಿ ಅದನ್ನು ಸಾಧಿಸಬಹುದು. ಅದಕ್ಕೆ ಅವಕಾಶವೂ ಇದೆ. ಮನಸ್ಸು ಮಾಡಬೇಕು ಅಷ್ಟೆ. ಮನಸ್ಸಿದ್ದರೆ ಮಾರ್ಗವಿದೆ. ಅನ್ಯ ಭಾಷಿಕರೂ ಕನ್ನಡದಲ್ಲಿ ಉದ್ದಾಮ ಭಾಷಾ ಪಂಡಿತರಾಗಿರುವುದುಂಟು. ಉಳಿದವರೂ ದೊಡ್ಡವರ ಮಾರ್ಗವನ್ನು ಅನುಸರಿಸಬೇಕು. ಒಲಿಸಿಕೊಂಡರೆ ಭಾಷೆ ಬಾಂಧವ್ಯದ ಬೆಳಕಿಂಡಿಯಾಗುತ್ತದೆ; ಮುನಿಸಿಕೊಂಡರೆ ಅಶಾಂತಿಯ ಕಿಚ್ಚಾಗುತ್ತದೆ. ಹುಟ್ಟು ಕನ್ನಡಿಗರು ಬೇರೆಯಲ್ಲ; ವಲಸೆ ಬಂದವರು ಬೇರೆಯಲ್ಲ. ಎಲ್ಲರೂ ಒಂದೇ. ಎಲ್ಲರಿಗೂ ಆಶ್ರಯ ಕರ್ನಾಟಕ. ಸಮಸ್ತ ಕರ್ನಾಟಕ ವಾಸಿಗಳೆಲ್ಲಾ ಕನ್ನಡ ಭಾಷೆಯನ್ನು ಕಲಿತು, ದಿನನಿತ್ಯದ ವ್ಯವಹಾರದಲ್ಲಿ ಬಳಸುತ್ತಾ, ಕನ್ನಡ ಭಾಷೆಯ ಬಂಧುಗಳಾಗೋಣ, ಕನ್ನಡ ಸಂಸ್ಕೃತಿಯ ಸಂವರ್ಧಕರಾಗೋಣ. *

### ಕನ್ನಡವೇ ಅಧಿದೇವತೆ

"ಕನ್ನಡ ರಾಜ್ಯದಲ್ಲಿ ಕನ್ನಡವೇ ಅಧಿದೇವತೆ, ಉಳಿದ ಭಾಷೆಗಳು ಪರಿವಾರ ಮಾತ್ರ .... ಕನ್ನಡ ನಾಡಿನ ವಿಶ್ವವಿದ್ಯಾನಿಲಯಗಳಲ್ಲಿ ಕನ್ನಡಕ್ಕೆ ಪ್ರಥಮ ಸ್ಥಾನ ದೊರೆಯಬೇಕು. ಇಲ್ಲಿಯ ಯಾವ ವಿಶ್ವವಿದ್ಯಾನಿಲಯವೂ ದೆಹಲಿ ವಿಶ್ವವಿದ್ಯಾನಿಲಯದ ಬಾಲಂಗೋಚಿಯಾಗಬಾರದು.. ರಾಜ್ಯದಲ್ಲಿ ಬಾಳಬೇಕೆನ್ನುವ ಜನರೆಲ್ಲ ಹಾಗೂ ಸರ್ಕಾರಿ ನೌಕರಿ ಬೇಕಾದವರೆಲ್ಲ ಕಡ್ಡಾಯವಾಗಿ ಕನ್ನಡ ಕಲಿಯಬೇಕು. ಕನ್ನಡ ಗೊತ್ತಿಲ್ಲದವರಿಗೆ ಸರ್ಕಾರದಲ್ಲಾಗಲಿ, ಖಾಸಗಿ ಸಂಸ್ಥೆಗಳಾಗಲಿ ನೌಕರಿ ಕೊಡಕೂಡದು .... ಕನ್ನಡಿಗರು ತಂತಮ್ಮ ಭಿನ್ನತೆಗಳನ್ನು ತೊರೆದು ಸ್ವಾರ್ಥವನ್ನು ಮರೆತು, ಒಟ್ಟುಗೂಡಿ, ಧೈರ್ಯದಿಂದ ವರ್ತಿಸದಿದ್ದರೆ ಬೆಳಗಾಂ ಕಳಚಿಹೋದೀತು .... ನುಡಿಯ ಅಳಿವುಳಿವು, ನಮ್ಮ ಅಳಿವಳಿವು, ನಾಡು ನುಡಿಗಳಿಗೊದಗುವ ಅನ್ಯಾಯ ಅಪಚಾರಗಳನ್ನು ಸಹಿಸೆವು. ನಾಡು ನುಡಿಗಳ ಅಭ್ಯುದಯವೊಂದೇ ನಮ್ಮ ಬಾಳಿನ ಏಕೈಕ ಗುರಿ..."

– ಡಾ. ದೇ.ಜ.ಗೌ.

೧೯೭೦ರಲ್ಲಿ ಬೆಂಗಳೂರಿನಲ್ಲಿ ನಡೆದ ನಲವತ್ತೇಳನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಿಂದ

### ಕನ್ನಡದ ದೀಪ

ಹೊತ್ತಿತೋ ಹೊತ್ತಿತು
ಕನ್ನಡದ ದೀಪ
ಮುಗಿಯಿತೋ ಮುಗಿಯಿತು
ಶತಮಾನಗಳ ಶಾಪ
ಹೊತ್ತಿತೋ ಹೊತ್ತಿತು
ಕನ್ನಡದ ದೀಪ !
ಕಣ್ಣು ಕುಕ್ಕಿಸುವಂತೆ
ದೇದೀಪ್ಯಮಾನ
ಹರ್ಷವುಕ್ಕಿಸುವಂತೆ
ಶೋಭಾಯಮಾನ
ಕನ್ನಡದ ಮನೆಯಾಗೆ
ಜ್ಯೋತಿರ್ನಿಧಾನ
ಕನ್ನಡದ ಪ್ರಾಣ
ಕನ್ನಡದ ಮಾನ
ಹೊತ್ತಿತೋ ಹೊತ್ತಿತು
ಕನ್ನಡದ ದೀಪ !

– ಕಾವ್ಯಾನಂದ





# ನಮ್ಮ ನಾಡಿನ ಮಹಾನ್ ಪುರುಷರು

– ಎಂ.ಎಸ್. ಗುರುಪಾದಸ್ವಾಮಿ
ಮಾಜಿ ಕೇಂದ್ರ ಸಚಿವರು



ನಮ್ಮ ರಾಷ್ಟ್ರದಲ್ಲಿ ಮುಖ್ಯವಾಗಿ ಮೂರು ಸಮಸ್ಯೆಗಳಿವೆ. ಮೊದಲನೆಯದು ಬಡತನದ ಸಮಸ್ಯೆ. ಹಾಗೂ ನಿರುದ್ಯೋಗ ಸಮಸ್ಯೆ; ಮತ್ತು ಅನಕ್ಷರತೆ. ನಮ್ಮ ಭಾರತದ ಸಂಸ್ಕೃತಿಯಲ್ಲಿ ಅನ್ನದಾನಕ್ಕೆ ಬಹಳ ಮಹತ್ವವಿದೆ. ಸಿದ್ಧಗಂಗಾಮಠ ಕನ್ನಡ ನಾಡಿನ ಚಾರಿತ್ರಿಕ ಮತ್ತು ಐತಿಹಾಸಿಕ ಪರಂಪರೆ ಬಗೆಗೆ ವರ್ತಮಾನದಲ್ಲೂ ಶೈಕ್ಷಣಿಕವಾಗಿ, ಧಾರ್ಮಿಕವಾಗಿ ತನ್ನ ಸ್ಥಾನವನ್ನು ಉಳಿಸಿಕೊಂಡು ಬರುತ್ತಿದೆ. ಸಿದ್ಧಗಂಗಾ ಕ್ಷೇತ್ರ ಬಹಳ ವರ್ಷಗಳಿಂದಲೂ ಅನ್ನದಾನಕ್ಕೆ ಹೆಸರುವಾಸಿಯಾದಂತಹ ಕ್ಷೇತ್ರ. ಈ ಕ್ಷೇತ್ರಕ್ಕೆ ಎಲ್ಲಾ ವರ್ಗದ ಜನರು ಮೊದಲಿನಿಂದಲೂ ಬರುತ್ತಿದ್ದಾರೆ. ಇವರಿಗೆಲ್ಲರಿಗೂ ಸಂಸ್ಥೆ ವಸತಿ ಮತ್ತು ಅನ್ನದಾನವನ್ನು ಮಾಡಿಕೊಂಡುಬರುತ್ತಾ ಇದೆ. ವಿದ್ಯಾರ್ಥಿಗಳ ವಿದ್ಯಾಭ್ಯಾಸ ಮತ್ತು ಅದರ ಅಭ್ಯುದಯಕ್ಕಾಗಿ ಸಿದ್ಧಗಂಗಾ ಮಠ ಅನೇಕ ಸೌಲಭ್ಯಗಳನ್ನು ಕಲ್ಪಿಸಿಕೊಡುತ್ತಾ ಬಂದಿದೆ. ಪ್ರತಿವರ್ಷ ಸಿದ್ಧಗಂಗಾ ಮಠದ ಕಾರ್ಯಕ್ಷೇತ್ರ, ಸೇವಾಕ್ಷೇತ್ರ ಬೃಹದಾಕಾರವಾಗಿ ಬೆಳೆಯುತ್ತಾ ಇದೆ. ಇದಕ್ಕೆ ಮುಖ್ಯ ಕಾರಣಕರ್ತರು ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು. ಇವರ ಕಾಲದಲ್ಲಿ ದಾಸೋಹಕ್ಕೆ ಅಗಾಧವಾದ ರೀತಿಯಲ್ಲಿ, ಅಸಾಧಾರಣ ರೀತಿಯಲ್ಲಿ ಬೆಂಬಲ ದೊರಕಿ ಕರ್ನಾಟಕದಲ್ಲಿ ಸಿದ್ಧಗಂಗಾ ಕ್ಷೇತ್ರಕ್ಕೆ ಅತ್ಯಂತ ಕೀರ್ತಿ, ಮನ್ನಣೆ ದೊರಕಿದೆ. ನನ್ನ ಅನುಭವದಲ್ಲಿ ನಮ್ಮ ರಾಜ್ಯದಲ್ಲಿ ದಾಸೋಹಕ್ಕೆ ಹೆಸರಾದಂತಹ ಎರಡು ಮಠಗಳಿವೆ. ಒಂದು ಸಿದ್ಧಗಂಗಾ ಮಠ, ಮತ್ತೊಂದು ದೇವನೂರು ಮಠ. ಈ ಎರಡು ಮಠಗಳಲ್ಲಿ ಸ್ವಂತ ಆಸ್ತಿಯ ಆಧಾರದ ಮೇಲೆ ದಾಸೋಹ ನಡೆಯುತ್ತಾ ಇಲ್ಲ, ಮುಖ್ಯವಾಗಿ ಭಕ್ತ ಜನರ ಅಭಿಮಾನ, ಭಕ್ತಿ ಹಾಗೂ ಪ್ರೀತಿ, ದೊರಕಿದ ಸಹಕಾರದಿಂದ ಈ ದಾಸೋಹ ನಡೆಯುತ್ತಾ ಇದೆ. ಇದಕ್ಕಿಂತ ಮಿಗಿಲಾಗಿ ಈ ಪುಣ್ಯಕ್ಷೇತ್ರದ ಪ್ರಭಾವದಿಂದ ನಡೆಯುತ್ತಾ ಇದೆ. ಸಿದ್ಧಗಂಗಾ ಕ್ಷೇತ್ರದಲ್ಲಿ ವ್ಯವಸ್ಥೆ ಇದೆ, ಶಿಸ್ತು ಇದೆ, ಮಹಾಸ್ವಾಮಿಗಳವರ ಸೇವಾ ಪ್ರಭಾವವಿದೆ. ಆದರೆ ದೇವನೂರುನಲ್ಲಿ ದಾಸೋಹ ನಡೆಯುತ್ತಾ ಇದ್ದರೂ ಈ ಗುಣ ವಿಶೇಷಗಳ ಅಭಾವ ಎದ್ದು ಕಾಣುತ್ತಾ ಇದೆ. ಸಿದ್ಧಗಂಗಾ ಮಠದಲ್ಲಿ ಜಾತಿ, ಗುಂಪುಗಳ ಭೇದಭಾವಿಲ್ಲದೆ ದಾಸೋಹವನ್ನು ನಡೆಸಿಕೊಂಡು ಬರುತ್ತಾ ಇದ್ದಾರೆ. ವೀರಶೈವ ಒಂದು ಧರ್ಮ ಎನ್ನತಕ್ಕಂತಹ ಭಾವನೆಯಲ್ಲ, ಒಂದು ವರ್ಗ ಅಥವಾ ಜಾತಿ ವ್ಯವಸ್ಥೆ ಎನ್ನುವ ಮಾರ್ಗದಲ್ಲಿ ಈ ದಾಸೋಹ ನಡೆಯುತ್ತಾ ಇದೆ. ಇದು ಒಂದು ದೊಡ್ಡ ವಿಶೇಷ.

### ಶ್ರೀವಾಣಿ

ಜೀವನ ಒಂದು ಕ್ರಿಯಾಕ್ಷೇತ್ರ. ಇಲ್ಲಿ ಕರ್ಮಶೀಲರಾಗಿ ಬದುಕುವುದು ಮುಖ್ಯ. ದುಡಿಮೆಗೆ ಇಲ್ಲಿ ಪ್ರಾಮುಖ್ಯತೆ. ದುಡಿಮೆ ಸತ್ಯಶುದ್ಧವಾಗಿರಬೇಕು, ಪರಹಿತಮುಖಿಯಾಗಿರಬೇಕು.

ನಮ್ಮ ಸಂಸ್ಕೃತಿಯಲ್ಲಿ ಅನ್ನದಾನದಷ್ಟೇ ವಿದ್ಯಾದಾನಕ್ಕೂ ಪ್ರಾಮುಖ್ಯ ಇದೆ. ಪೂಜ್ಯ ಶ್ರೀಗಳವರು ಇದನ್ನು ಅರಿತುಕೊಂಡು ಅನೇಕ ವಿದ್ಯಾಸಂಸ್ಥೆಗಳನ್ನು ಅನೇಕ ಕಡೆಗಳಲ್ಲಿ ಅದರಲ್ಲೂ ಮುಖ್ಯವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ತೆರೆದಿದ್ದಾರೆ. ಎಲ್ಲ ಘಟ್ಟದಲ್ಲಿಯೂ ಇವರು ತೆರೆದಂತಹ ವಿದ್ಯಾಸಂಸ್ಥೆಗಳು ಕೆಲಸ ಮಾಡುತ್ತಾ ಇವೆ. ಜ್ಞಾನ ಹಾಗೂ ವಿಜ್ಞಾನ ಈ ಎರಡು ಕ್ಷೇತ್ರಗಳಲ್ಲೂ ಪೂಜ್ಯ ಶ್ರೀಗಳು ದುಡಿದಿದ್ದಾರೆ. ಸಾವಿರಾರು ವಿದ್ಯಾರ್ಥಿಗಳು ಇವರ ವಿದ್ಯಾಸಂಸ್ಥೆಗಳಲ್ಲಿ ವ್ಯಾಸಂಗ ಮಾಡಿ, ತೇರ್ಗಡೆಯಾಗಿ ರಾಜ್ಯ, ದೇಶ ಮತ್ತು ವಿದೇಶಗಳಲ್ಲಿ ಅನೇಕ ಉದ್ಯಮಗಳಲ್ಲಿ, ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ದಾಸೋಹ ಕ್ಷೇತ್ರದಲ್ಲಿ ಇರುವಂತೆ ವಿದ್ಯಾಕ್ಷೇತ್ರದಲ್ಲೂ ಕೂಡ ಲಿಂಗ, ಜಾತಿ, ಪ್ರಾದೇಶಿಕ ಭೇದಗಳಿಲ್ಲದೆ ವಿದ್ಯಾರ್ಥಿಗಳಿಗೆ ಇವರ ಸಂಸ್ಥೆಯು ಆಶ್ರಯವನ್ನು ಕೊಡುತ್ತಾ ಬಂದಿದೆ. ಈ ಸಂಸ್ಥೆಗಳ ಬೆಳವಣಿಗೆಗೆ ಶ್ರೀಗಳವರ ಪರಿಶ್ರಮ, ಕ್ರಿಯಾಶೀಲತೆ ಹಾಗೂ ಪ್ರಭಾವವೇ ಮುಖ್ಯ ಕಾರಣವಾಗಿದೆ. ಗುಣಮಟ್ಟದಲ್ಲಿ ಈ ಸಂಸ್ಥೆಗಳಲ್ಲಿ ನಡೆಯತಕ್ಕಂತಹ ಪಾಠಪ್ರವಚನಗಳು ಬೇರೆ ಸಂಸ್ಥೆಗಳಿಗೆ ಮಾದರಿಯಾಗಿದೆ. ವಿದ್ಯಾಕ್ಷೇತ್ರದಲ್ಲಿ ಸ್ವಾಮಿಗಳವರ ಸೇವೆ ಅಸಾಧಾರಣವಾಗಿದ್ದರೂ ಅದು ಸ್ಥಗಿತವಾಗಿಲ್ಲ, ಅದು ಇಂದು ಹೆಚ್ಚಾಗುತ್ತಾ ಮುಂದುವರೆದುಕೊಂಡು ಹೋಗುತ್ತಾ ಇದೆ.

ಸಿದ್ಧಗಂಗಾ ಕ್ಷೇತ್ರದಲ್ಲಿ ನಾನು ಮತ್ತೊಂದು ವಿಶೇಷತೆಯನ್ನು ಆಸಕ್ತಿಯಿಂದ ವೀಕ್ಷಿಸುತ್ತಾ ಇದ್ದೇನೆ. ಅಲ್ಲಿ ಕೇವಲ ಅನ್ನದಾನ ಮತ್ತು ವಿದ್ಯಾದಾನ ಅಷ್ಟೇ ಅಲ್ಲದೆ ಧರ್ಮ ಮತ್ತು ಮೌಲ್ಯದ ಕಾರ್ಯಚಟುವಟಿಕೆಗಳನ್ನು ಪೂಜ್ಯ ಸ್ವಾಮಿಜೀಯವರು ಬಹಳ ಶ್ರದ್ಧೆ ಆಸಕ್ತಿಯಿಂದ ನಡೆಸಿಕೊಂಡು ಬರುತ್ತಿದ್ದಾರೆ. ಅನೇಕ ಸಂಸ್ಥೆಗಳಲ್ಲಿ ನೀತಿ, ಧರ್ಮ ಆಚಾರ ವಿಚಾರಗಳ ಬಗ್ಗೆ ಒಲವು ಅಷ್ಟಾಗಿ ಇಲ್ಲದೆ ಇರುವುದು ಕಂಡುಬರುತ್ತಾ ಇದೆ. ಈ ಕ್ಷೇತ್ರದಲ್ಲಿ ಪೂಜ್ಯ ಶ್ರೀಗಳು ತತ್ವ ಮೌಲ್ಯಗಳನ್ನು ಅಲ್ಲಿ ಬರತಕ್ಕಂತಹ ಜನರು ಮತ್ತು ವಿದ್ಯಾರ್ಥಿಗಳಿಗೆ ಲಭಿಸುವ ಹಾಗೆ ಕಾರ್ಯಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ನಾನು ಇದನ್ನು ನೋಡಿ ತುಂಬಾ ತೃಪ್ತಿಪಟ್ಟಿದ್ದೇನೆ. ನಾನು ಮತ್ತು ನನ್ನ ಕುಟುಂಬ ಈ ಕ್ಷೇತ್ರದಲ್ಲಿ ಸ್ವಲ್ಪ ಕಾಲ ಕಳೆದು ಪ್ರತ್ಯಕ್ಷವಾಗಿ ನೋಡಿದ್ದೇನೆ.

ಶ್ರೀ ಶ್ರೀ ಶಿವಕುಮಾರ ಸ್ವಾಮಿಯವರ ಕಾರ್ಯಚಟುವಟಿಕೆಗಳು ವಿಸ್ತಾರವಾಗಿರುವಂತೆಯೇ ಅವರ ವ್ಯಕ್ತಿತ್ವವೂ ಕೂಡ ಅಷ್ಟೇ ಅಮೋಘವಾಗಿದೆ. ಅವರನ್ನು ನಾನು ಬಹಳ ವರ್ಷಗಳಿಂದ ನೋಡುತ್ತಿದ್ದೇನೆ – ದೂರದಿಂದ ಮತ್ತು ಹತ್ತಿರದಿಂದ. ಅವರು ಕೇವಲ ಆಡಂಬರಕ್ಕಾಗಿ, ಜನಗಳನ್ನು ಮೆಚ್ಚಿಸುವುದಕ್ಕಾಗಿ, ತಮ್ಮ ಪ್ರತಿಷ್ಠೆಯನ್ನು ಸ್ಥಾಪಿಸುವುದಕ್ಕಾಗಿ ಸಂಘ ಸಂಸ್ಥೆಗಳನ್ನು ಕಟ್ಟುತ್ತಿಲ್ಲ. ಅವರದು ಸಾಮಾನ್ಯ ವ್ಯಕ್ತಿತ್ವವಲ್ಲ. ಅವರು ಸಾಮಾನ್ಯ ಮಠಾಧಿಪತಿಗಳಲ್ಲ. ಅವರು ಕಟ್ಟಿರತಕ್ಕಂತಹ ಸಂಸ್ಥೆಗಳು ಆಧಿಕ್ಯಕ್ಕಿಂತಲೂ (ವಿಸ್ತಾರ) ಮೀರಿದಂತಹ ವಿಶಾಲವಾದಂತಹ ವೈವಿಧ್ಯಮಯ ಅವರ ಪಾಂಡಿತ್ಯ, ಕಲ್ಪನೆ, ದೃಷ್ಟಿ, ಭಾವನೆ ಬಹಳ ಉನ್ನತವಾದುದು. ಅವರು ಅನುಭವಿಗಳು, ತಪಸ್ವಿಗಳು, ಉನ್ನತ ಪಾಂಡಿತ್ಯವುಳ್ಳವರು. ಅವರ ಭಾಷಣದಲ್ಲಿ ಇಟಲಿಯ ಮಹಾಲೇಖಕ ಬರಹಗಾರ ಮ್ಯಾಜಿನಿಯ ವಾಕ್ಯವೊಂದನ್ನು ಹೇಳುತ್ತಿರುತ್ತಾರೆ. ಅದನ್ನು ನಾನು ಕೇಳಿದ್ದೇನೆ. "There should be progress of all through all ruled by the best and the best" ಅಂದರೆ ಸಮಾಜದಲ್ಲಿ ಪರಿವರ್ತನೆಯಾಗಬೇಕು. ಎಲ್ಲ ವರ್ಗದ ಜನರು ಒಳ್ಳೆಯ ಜೀವನವನ್ನು ಪಡೆದುಕೊಳ್ಳಬೇಕು. ಇಡೀ ದೇಶಕ್ಕೆ ಸುಖ ಸಂತೋಷ ಸಿಗಬೇಕು. ''ಸ್ವಾಮೀಜಿಯವರ ದೃಷ್ಟಿ, ಭಗವಾನ್ ಬಸವೇಶ್ವರರ ದೃಷ್ಟಿ ಎರಡೂ ಒಂದೇ.'' ಎಲ್ಲರಿಗೂ ಲೇಸನ್ನೇ ಬಯಸಬೇಕು ಎಂದು ಬಸವಣ್ಣ ಹೇಳಿದ್ದಾರೆ. ಅದೇ ರೀತಿ ಸ್ವಾಮೀಜಿಯವರು ನಡೆದುಕೊಂಡು ಬರುತ್ತಿದ್ದಾರೆ. ಇದೊಂದು ದೊಡ್ಡ ವಿಶೇಷ ಅವರ ವ್ಯಕ್ತಿತ್ವದಲ್ಲಿ ನಾನು ಕಂಡಿರತಕ್ಕಂತದ್ದು.

ಬಡತನ ನಿರ್ಮೂಲನದ ಬಗೆಗೆ, ಇವರು ಚಿಂತನೆಯ ನಿಲುವು, ಬಡವರ ಬಗೆಗೆ ಇವರ ಕಾಳಜಿ, ಕಳಕಳಿ ಅಂತಹವರಿಗೆ ಹೆಚ್ಚಿನ ಸೇವೆ ಸಲ್ಲಿಸುವ ಇವರ ಒಲವು ಎಲ್ಲಾ ಸ್ವಾಮಿಗಳಲ್ಲೂ ಇಲ್ಲದಿರುವ ವಿಶೇಷತೆ. ಹಳ್ಳಿಗಾಡಿನ ಜನತೆಗೆ ಶಿಕ್ಷಣ ನೀಡುವುದರಲ್ಲಿ ಅವರಿಗಿರುವ ಅಪಾರವಾದ ವಾತ್ಸಲ್ಯ ಅನನ್ಯವಾದುದು. ದೇಶದಲ್ಲಿನ ನಿರುದ್ಯೋಗಿಗಳ ನಿರ್ಮೂಲನಕ್ಕೆ ಅವರು ನೀಡುತ್ತಾ ಬಂದಿರುವ ಸಲಹೆಗಳು ಅದರ ಪರಿಹಾರ ಮಾರ್ಗೋಪಾಯಗಳನ್ನು ಅನುಸರಿಸುವುದಾದರೆ ಎಲ್ಲರ ಕ್ಷೇಮಕ್ಕೆ ನಾಂದಿಯಾದೀತು.





ನಾನು ನನ್ನ ಕುಟುಂಬ ಸಿದ್ಧಗಂಗೆಯಲ್ಲಿ ಇದ್ದಾಗ ಪ್ರಾತಃಕಾಲ ಅವರ ಪೂಜೆಯಲ್ಲಿ ಅವರ ಜೊತೆ ಕುಳಿತು ಪೂಜೆ ಮಾಡಿದ್ದೇವೆ. ಪೂಜೆಯಾದ ಮೇಲೆ ಅವರ ಜೊತೆಯಲ್ಲಿ ಬೇವಿನ ರಸವನ್ನೂ ಕುಡಿದಿದ್ದೇನೆ. ಫಲಾಹಾರವನ್ನೂ ಮಾಡಿದ್ದೇವೆ. ಅವರ ಸರಳತೆಯನ್ನು ನೋಡಿ ತುಂಬಾ ಮೆಚ್ಚಿದ್ದೇನೆ. ಸಂತೋಷಪಟ್ಟಿದ್ದೇನೆ. ಈಗ ಅವರಿಗೆ ತೊಂಬತ್ನಾಲ್ಕು ವರ್ಷಗಳು ತುಂಬಿವೆ. ಈ ವಯಸ್ಸಿನಲ್ಲೂ ಅವರ ಉತ್ಸಾಹ ಕಡಿಮೆಯಾಗಿಲ್ಲ, ಸಂಚಾರ ಕಡಿಮೆಯಾಗಿಲ್ಲ, ಕಾರ್ಯಚಟುವಟಿಕೆ ಕಡಿಮೆಯಾಗಿಲ್ಲ, ಇವುಗಳು ಅಡ್ಡಿ ಆತಂಕವಿಲ್ಲದೆ ನಡೆದುಕೊಂಡು ಬರುತ್ತಿವೆ. ಅವರ ಸೇವಾಫಲವನ್ನು ಸಹಸ್ರಾರು ಜನರು ಪಡೆದುಕೊಳ್ಳುತ್ತಿದ್ದಾರೆ. ಅನೇಕ ಕಡೆ ಅವರ ಜನ್ಮೋತ್ಸವವನ್ನು ಜನರು ತಾನಾಗಿ ಮುಂದೆ ಬಂದು ಆಚರಿಸಿದ್ದಾರೆ. ಪ್ರಾಯಶಃ ಮಠಾಧಿಪತಿಗಳಲ್ಲಿ ಇಂತಹ ಶ್ರೇಷ್ಠರಾದಂತಹ ಮಹಿಮರು ಸಿಗುವುದು ಕಷ್ಟ. ಯಾವುದೋ ದೈವಿಕ ಶಕ್ತಿ ಇವರಿಗೆ ಚೇತನವನ್ನು ಕೊಟ್ಟಿದೆ. ಅವರು ಕೇವಲ ವೀರಶೈವ ಧರ್ಮಕ್ಕೆ ಸೇರಿದ ಒಬ್ಬ ಗುರುವಲ್ಲ. ಅವರು ದೇಶಕ್ಕೆ ಸೇರಿದಂತಹ ಮಹಾನ್ ಪುರುಷರಾಗಿದ್ದಾರೆ. ಅವರು ಇನ್ನು ಹತ್ತಾರು ವರ್ಷಗಳ ಕಾಲ ಬಾಳಿ-ಬದುಕಬೇಕೆಂದು ದೇವರಲ್ಲಿ ಪ್ರಾರ್ಥನೆ ಮಾಡುತ್ತೇನೆ. ಯಾವಾಗಲೂ ಇವರ ಹೆಸರು ಶಾಶ್ವತವಾಗಿರಲೆಂದು ಆಶಿಸುತ್ತೇನೆ. (ಕೃಪೆ : ತೊಂಭತ್ತರ ತಪಸ್ವಿ) ❖

## ಶಿಕ್ಷಣ ಭಾಷೆ : ಒಂದು ಚಿಂತನೆ

''.....ಯಂತ್ರನಾಗರಿಕತೆಯ ಕಾರಣದಿಂದ ನಮ್ಮ ಜೀವನದಿಗಳ ನೀರೆಲ್ಲ ಕಲುಷಿತವಾಗಿದೆ; ಬೆಟ್ಟಗುಡ್ಡಗಳ ಹಾಗೂ ಅರಣ್ಯದ ಹಸುರೆಲ್ಲ ನಾಶವಾಗುತ್ತಿವೆ; ಗ್ರಾಮೀಣ ಪರಿಸರದ ಕೈಗಾರಿಕೆಗಳೂ ಕುಶಲಕಲೆಗಳೂ ಹೇಳಹೆಸರಿಲ್ಲದಾಗಿವೆ. ಇಂಥ ಪರಿಸರ ನಾಶದಿಂದ ನಮ್ಮ ನಾಳಿನ ಮಕ್ಕಳ ಭವಿಷ್ಯದ ಬಗ್ಗೆ ಸೂಕ್ಷ್ಮ ಸಂವೇದನೆಯುಳ್ಳವರು ತಲ್ಲಣಿಸುವಂತಾಗಿದೆ. ಗಾಂಧೀಜಿಯ ಗ್ರಾಮಸ್ವರಾಜ್ಯದ ಕಲ್ಪನೆಗಳನ್ನೂ ವಿಚಾರಗಳನ್ನೂ ನಿರಾಕರಿಸಿದ ಪರಿಣಾಮದಿಂದ ಈ ದೇಶ ತೆರಬೇಕಾದ ಬೆಲೆ ಅಪಾರವಾಗಿದೆ. ಸಮುದಾಯದ ಹಿತಾಸಕ್ತಿಗೆ ಅಗತ್ಯವಾದ ಆಧುನಿಕ ಪ್ರಗತಿಯನ್ನೂ, ಪರಿಸರ ಸಂರಕ್ಷಣೆಯ ಕಾರ್ಯವನ್ನೂ, ಪರಸ್ಪರ ವಿರೋಧವಿಲ್ಲದೆ ನಿರ್ವಹಿಸುವುದು ಹೇಗೆ ಎಂಬ ಸಮಸ್ಯೆಗಳು, ಮಾನವತಾವಾದಿಗಳು ಈ ದಿನ ಎದುರಿಸಬೇಕಾದ ಸವಾಲುಗಳಾಗಿವೆ....''

''........ ಇನ್ನು ನಮ್ಮ ಮಕ್ಕಳನ್ನು ನೋಡಿ. ಅವೇನು ಶಾಲೆಗೆ ಹೋಗುತ್ತಿದ್ದಾವೋ, ಪರ್ವತಾರೋಹಣಕ್ಕೆ ಹೊರಟಿವೆಯೋ? ಬೆನ್ನಮೇಲೆ ಹೊರಲಾಗದ ಹೊರೆಹೊತ್ತು ಸುಸ್ತಾಗುವ ಈ ಮಕ್ಕಳನ್ನು ನೋಡಿದರೆ ಯಾರಿಗಾದರೂ ಅಯ್ಯೋ ಅನಿಸಿತು. ಜಗತ್ತಿನಲ್ಲಿರುವ ಸಮಸ್ತಜ್ಞಾನವನ್ನು ಮಕ್ಕಳಿಗೆ ಅರೆದು ಕುಡಿಸಲೇಬೇಕೆಂಬ ಈ ಮಹತ್ವಾಕಾಂಕ್ಷೆಗೆ ಏನು ಹೇಳೋಣ? ಹಿಂದಿಗಿಂತ ಜಗತ್ತು ಬಹಳ ಮುಂದುವರಿದಿದೆ, ಇವತ್ತಿನ ಶಿಕ್ಷಣದ ಅಗತ್ಯಗಳೇ ಬೇರೆ ಎಂದು ಯಾರಾದರೂ ವಾದಿಸಬಹುದು. ದಿನವೆಲ್ಲ ಪುಸ್ತಕದ ಹೊರೆಹೊತ್ತು ಸಂಜೆಗೆ ಮರುದಿನದ ಹೋಂವರ್ಕಿನ ಚಿಂತೆಯನ್ನು ತಲೆಗೆ ತುಂಬಿಕೊಂಡ ಈ ಮಗುವಿಗೆ ಒಂದಿಷ್ಟಾದರೂ ವಿರಾಮ ಬೇಡವೆ? ನಮ್ಮ ಮಕ್ಕಳು ಆಕಾಶವನ್ನು ನೋಡುವುದು ಯಾವಾಗ? ಅರಳಿದ ಹೂವುಗಳನ್ನು ನೋಡುವುದು ಯಾವಾಗ? ಹರಿಯುವ ನೀರನ್ನು ನೋಡುವುದು ಯಾವಾಗ? ಎನ್ನುವ 'Less Luggage more comfort' ಎನ್ನುವ ಪ್ರಯಾಣದ ಸೂತ್ರ ಇಲ್ಲಿಗೇಕೆ ಅನ್ವಯವಾಗುವುದಿಲ್ಲ? ....''

''...... ಇನ್ನು ನಮ್ಮ ಶಾಲೆಯ ಪಠ್ಯಪುಸ್ತಕಗಳನ್ನು ನೋಡಿದರೆ ಇನ್ನೂ ನಿರಾಸೆ ಕವಿಯುತ್ತದೆ. ಒಂದು ಸಲ ಗೊತ್ತುಮಾಡಿದ ಪುಸ್ತಕಗಳು ಅನೇಕ ವರ್ಷಗಳ ಕಾಲ ಬದಲಾಗುವುದಿಲ್ಲ, ನವೀಕರಣಗೊಳ್ಳುವುದಿಲ್ಲ. ನನ್ನ ಗಮನಕ್ಕೆ ಬಂದಂತೆ ಪ್ರಸ್ತುತ ಪ್ರಾಥಮಿಕ ಹಾಗೂ ಪ್ರೌಢಶಾಲೆಯ ಹಂತಗಳ ಪಠ್ಯಗಳು ಬದಲಾಗದೆ ಬಹುಶಃ ಹತ್ತುವರ್ಷಕ್ಕೂ ಹೆಚ್ಚು ಕಾಲವಾಗಿರಬೇಕು. ಅವುಗಳಲ್ಲಿರುವ ಕನ್ನಡ ಭಾಷೆ ಸಾಹಿತ್ಯಕ್ಕೆ ಸಂಬಂಧಪಟ್ಟ ಪಾಠಗಳಂತೂ ನಿಜವಾಗಿಯೂ ಕನ್ನಡದ ಬಗ್ಗೆ ಪ್ರೀತಿ ಹುಟ್ಟಿಸುವಂತಿವೆ ಎಂದೇನೂ ನನಗೆ ತೋರುವುದಿಲ್ಲ. ಇಂಥ ಕಳಪೆ ಪಠ್ಯವಿಷಯಗಳಿಂದ, ಸಾಹಿತ್ಯದ ಬಗೆಗಾಗಲೀ, ಸಂಸ್ಕೃತಿಯ ಬಗೆಗಾಗಲೀ ಅಭಿಮಾನ ಹುಟ್ಟೀತು ಹೇಗೆ? ಪ್ರಾಥಮಿಕ ಶಾಲೆಗಳಿಂದ ಹಿಡಿದು ಸ್ನಾತಕೋತ್ತರ ಹಂತದವರೆಗೆ ಕನ್ನಡ ಪಠ್ಯಕ್ರಮ ಮತ್ತು ವಿಧಾನಗಳ ಮರುಪರಿಶೀಲನೆ, ಹಾಗೂ ಹೊಸದೃಷ್ಟಿಯ ಪಠ್ಯಗಳ ರಚನೆಗೆ, ಹೊಸದಾಗಿ ಪ್ರಾರಂಭವಾಗಲಿರುವ ಕನ್ನಡ ವಿಶ್ವವಿದ್ಯಾಲಯವು ಯೋಜನೆಯೊಂದನ್ನು ಹಾಕಿಕೊಳ್ಳುವುದು ಅಗತ್ಯವಾಗಿದೆ....''

– ಡಾ. ಜಿ.ಎಸ್. ಶಿವರುದ್ರಪ್ಪ

ಅಖಿಲ ಭಾರತ ೬೧ನೆಯ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರು

## ವಚನಗಳ ವಿಶ್ಲೇಷಣೆ

*ಎನ್ನ ನಡೆಯೊಂದು ಪರಿ !*
*ಎನ್ನ ನುಡಿಯೊಂದು ಪರಿ !*
*ಎನ್ನೊಳಗೇನೂ ಶುದ್ಧವಿಲ್ಲ ನೋಡಯ್ಯ !*
*ನುಡಿಗೆ ತಕ್ಕ ನಡೆಯು ಕಂಡರೆ*
*ಕೂಡಲಸಂಗಮದೇವ ತನ್ನೊಳಗಿಪ್ಪನಯ್ಯ !*

ಮಾಡುವುದು ಅನಾಚಾರ, ಮಾತಾಡುವುದು ಸದ್ವಿಚಾರ ! ಮಾಡುವುದಕ್ಕೂ ಮಾತಾಡುವುದಕ್ಕೂ ತಾಳಮೇಳವಿಲ್ಲದ ಮೇಲೆ, ಅಂತಶುದ್ಧಿ ಎಲ್ಲಿಯದು ? ನುಡಿಯುವ ಚಟವಿದ್ದಂತೆ, ನಡೆಯುವ ಹಠವಿದ್ದರೆ–ಆಗ ದೇವರು ನಮ್ಮ ಮೈದುಂಬಿಕೊಳ್ಳುವನು.

*ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ !*
*ಅಂಬುಜಕ್ಕೆ ಭಾನುವಿನ ಉದಯದ ಚಿಂತೆ !*
*ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ !*
*ನಮಗೆ ನಮ್ಮ ಕೂಡಲಸಂಗಮದೇವರ*
*ನೆನೆವುದೇ ಚಿಂತೆ !*

ಚಂದ್ರಿಕಾರಸಪರಿಪ್ಲುತವಾದಲ್ಲದ ಶೂನ್ಯಾನಂತದಲ್ಲಿ–ಚಕೋರ ಪಕ್ಷಿ ತನ್ನ ಗರಿ ಗೆದರಿ ಎತ್ತರಕ್ಕೆ ಏರಿ, ಆದಿ-ಅಂತಗಳನ್ನು ತುಳುಕಿಸಿ ಪುಳುಕಿಸಿ ಹಾರಾಡಲಾರದು. ಆದುದರಿಂದಲೇ ಅದಕ್ಕೆ ಬೆಳುದಿಂಗಳಿನ ಚಿಂತೆ ! ತರುಣಸೂರ್ಯಾರುಣಕಿರಣ ಕರತಲ ಕರುಣ-ಸ್ಪರ್ಶವಾದಲ್ಲದೆ, ತಾವರೆ ದಳ ದಳ ಅರಳಿ, ರಸತುಂಬಿ, ತುಂಬಿಕೂಟದಲ್ಲಿ ತನ್ಮಯವಾಗಿರಲಾರದು. ಆದುದರಿಂದಲೇ ಅದಕ್ಕೆ ಸೂರ್ಯೋದಯದ ಚಿಂತೆ ! ತನ್ನ ನಾಲ್ಕೂ ರೆಕ್ಕೆ, ಬಿಚ್ಚಿ ಸುತ್ತೆಲ್ಲ ಬಯಲಲ್ಲಿ ನಿರಂತರ ಝೇಂಕಾರ ತಾರಸ್ವರದಲ್ಲಿ ಮೊರೆದು ಮೊರೆಯಿಟ್ಟು ಭ್ರಮಿಸಿ ಬಳಲಿದ ಭ್ರಮರವು–ಬದ್ಧಪುಷ್ಪಾಂಜಲಿ ಬಿರಿದು ತೂರೆದ ಜೇನ್‌ಗಂಗೆಯಲ್ಲಿ ಮೋರೆಯೂರಿ ಎದೆಯೂರ ಈಂಟಿದಲ್ಲದೆ ಸಂಭ್ರಮಿಸದು. ಆದುದರಿಂದಲೇ ಅದಕ್ಕೆ ಜೇನ ಚಿಂತೆ ! ಭಕ್ತನಿಗಾದರೋ ಆತ್ಮಾನಂದದಲ್ಲಿ ವಿಹರಿಸಿ, ತನ್ನ ಹೃದಯ ಸಹಸ್ರಾರವನ್ನು ಅರಳಿಸಿ, ಭವರೋಗವನ್ನು ಪರಿಹರಿಸುವ ಅಮೃತವನ್ನು ಆಸ್ವಾದಿಸಲು ಅನುಮಾಡಿಕೊಡುವ ಶಿವಧ್ಯಾನದ ಕಡೆಗಲ್ಲದೆ, ಅವನ ಮನ ಓಲದು ಒಲಿಯದು ಮಿಕ್ಕೆಡೆಗೆ !

*ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯ !*
*ಚಂದ್ರ, ಕುಂದೆ ಕುಂದುವುದಯ್ಯ !*
*ಚಂದ್ರಂಗೆ ರಾಹುವಡ್ಡ ಬಂದಲ್ಲಿ ಅಂಬುಧಿ ಬೊಬ್ಬಿಟ್ಟಿತ್ತೆ ?*
*ಅಂಬುಧಿಯ ಮುನಿಯಾಪೋಶನವ ಕೊಂಬಲ್ಲಿ*
*ಚಂದ್ರಮನಡ್ಡ ಬಂದನೆ ?*
*ಆರಿಗಾರೂ ಇಲ್ಲ, ಕೆಟ್ಟವಂಗೆ ಕೆಳೆಯಿಲ್ಲ !*
*ಜಗದ ನಂಟ ನೀನೇ, ಅಯ್ಯ ಕೂಡಲಸಂಗಮದೇವ !*

ಚಂದ್ರೋದಯವಾದರೆ ಕಡಲುಬ್ಬಿ ಉಕ್ಕೇರುವುದು. ಚಂದ್ರಾಸ್ತವಾದರೆ ಕಡಲು ಕುಂದಿ ಕುಸಿಯುವುದು ! ಚಂದ್ರನಿಗೂ, ಕಡಲಿಗೂ ಪರಸ್ಪರ ಸ್ನೇಹವೇನೋ ಇದೆ. ಆದರೆ ಒಬ್ಬರ ಕಷ್ಟವನ್ನು ಪರಿಹರಿಸುವ ಸಾಮರ್ಥ್ಯವಿನೊಬ್ಬರಿಗಿಲ್ಲ. ಅಖಿಲರ ಕಷ್ಟಗಳನ್ನೂ ಪರಿಹರಿಸಬಲ್ಲ ನಿಖಿಲ ಸಾಮರ್ಥ್ಯ ಶಿವನಿಗಲ್ಲದೆ ಮಿಕ್ಕವರಿಗಿಲ್ಲ. ಬಂಧು ಬಳಗ, ಗೆಳೆಯರ ತಂಡ, ಪರಿಜನವೃಂದ–ಇದೆಯೆಂದು ದೇವರನ್ನು ಮರೆಯಬೇಡ. ಎಲ್ಲರ ಕಷ್ಟಗಳನ್ನೂ ಅರಿತು, ಸಮಯವರಿತು ಸಹಾಯಮಾಡಬಲ್ಲವನೆಂದರೆ ಆ ದೇವರೊಬ್ಬನೇ. ಅವನೇ ಜಗದ ನಂಟ ! ಇಂದಿನ ಗೆಳೆಯರು ನಾಳೆ ಕೈಬಿಡಬಹುದು. ಆದರೆ, ಎಂದೆಂದಿಗೂ ಕೈಹಿಡಿದು ನಡೆಸುವನೆಂದರೆ ಆ ದೇವರೊಬ್ಬನೇ !

*ಬಡಪಶು ಪಂಕದಲ್ಲಿ ಬಿದ್ದರೆ*
*ಕಾಲ ಬಡಿವುದಲ್ಲದೆ ಬೇರೆ ಗತಿಯುಂಟೆ ?*
*ಶಿವ ಶಿವಾ ಹೋದಹೆ ಹೋದಹೆನಯ್ಯ !*
*ನಿಮ್ಮ ಮನದತ್ತಲೆನ್ನ ತೆಗೆಯಯ್ಯ !*
*ಪಶುವಾನು ಪಶುಪತಿ ನೀನು !*
*ತುಡುಗುಣಿಯೆಂದೆನ್ನ ಹಿಡಿದು ಬಡಿಯದ ಮುನ್ನ*
*ಒಡೆಯ, ನಿಮ್ಮ ಬೈಯದಂತೆ ಮಾಡು*
*ಕೂಡಲಸಂಗಮದೇವ*

ಬಡ ಗೋವೊಂದು ವಿವೇಚನೆಯಿಲ್ಲದೆ ಅನ್ಯರ ಹೊಲದಲ್ಲಿ ಮೇಯಲೆಂದು ಹೋಗಿ ಕೆಸರಲ್ಲಿ ಸಿಕ್ಕಿಬಿದ್ದರೆ ಕಾಲುಬಡಿಯುವುದಲ್ಲದೆ ಮತ್ತೇನು ತಾನೇ ಮಾಡೀತು ! ಹಾಗೆಯೇ ನಾನು ನನ್ನ ಅಂತರಾತ್ಮಕ್ಕೆ ಅನ್ಯವಾದ ವಿಷಯಗಳತ್ತ ಮನ ಹರಿಸಿ, ಈ ಸಂಸಾರ ಪಂಕದಲ್ಲಿ ಕಾಲಿಕ್ಕಿ ಒಳಕ್ಕೆ ಹೂತುಹೋಗುತ್ತಿದ್ದೇನೆ. ಎಲೆ ದೇವರೇ, ನನ್ನನ್ನು ನಿನ್ನತ್ತಲೆಳೆದು ಕೋ ! ನಾನು ಗೋವು, ನೀನು ಗೋಪಾಲ, ನಾನು ಏನೂ ಅರಿಯದ ಪಶು, ನೀನು ಪಶುಪತಿ : ಚಾಪಲ್ಯಕ್ಕೆ ಬಲಿಬಿದ್ದು ಅಡ್ಡಹಾದಿ ಹಿಡಿದೆ; ರಕ್ಷಿಸುವ ಭಾರ ನಿನ್ನದು. ಲೋಕವು ನನ್ನನ್ನು ತುಡುಗು ಮೇಯುವ ದನವೆಂದು ಬಡಿದು, ನನ್ನ ರಕ್ಷಕನಾದ ನಿನ್ನನ್ನು ಬೈಯುವುದಕ್ಕೆ ಮೊದಲೇ ನನ್ನನ್ನು ಉದ್ಧರಿಸು. ಜನರು ನನ್ನನ್ನು ಬಡಿಯುವರೆಂಬುದಕ್ಕಿಂತ, ನನ್ನ ಕಾರಣವಾಗಿ ನಿನ್ನನ್ನು ಅವರು ಬೈಯುವರೆಂಬುದೇ ನನ್ನನ್ನು ಹೆಚ್ಚು ನೋಯಿಸುತ್ತಿರುವುದು. ಇನ್ನೊಮ್ಮೆ ನಿನ್ನ ಹೊಲ ಮೇರೆಯನ್ನು ಬಿಟ್ಟು ಅಲುಗುವುದಿಲ್ಲ. ಇಂದೊಮ್ಮೆಗೆ ಸೈರಿಸಿ ಸಂರಕ್ಷಿಸು–ಎಂದು ಬಸವಣ್ಣನವರು ಸಂಸಾರದ ವಿಷಯವಿಪ್ಲವ ವಿಷಮ ಪರಿಸ್ಥಿತಿಯಲ್ಲಿ ನೊಂದು ದೇವರಿಗೆ ಮೊರೆಯಿಟ್ಟಿರುವರು.

– ಸಂ. ಡಾ. ಎಲ್. ಬಸವರಾಜು

*(ಕೃಪೆ : ಬಸವ ವಚನಾಮೃತ)*





# ಶಿಕ್ಷಣ ಕ್ಷೇತ್ರದಲ್ಲಿನ ಕೆಲವು ನವೀನ ಒಲವುಗಳು - ಒಂದು ವಿವೇಚನೆ

*- ಪ್ರೊ. ಕೆ.ಆರ್. ಹಂದೆ*
ನಿರ್ದೇಶಕರು,
ಡಾ. ಟಿ.ಎಂ. ಪೈ, ಶಿಕ್ಷಣ ಸಂಪದಭಿವೃದ್ಧಿ ಕೇಂದ್ರ
ಉಡುಪಿ - ೭.

ಒಂದು ದೇಶದ ಸಮೃದ್ಧಿ, ಸಂಪತ್ತು, ಜನಪದದ ಜೀವನ ಗುಣಮಟ್ಟ - ಎಲ್ಲವೂ ಅಲ್ಲಿನ ಪ್ರಚಲಿತ ಶಿಕ್ಷಣ ಪದ್ಧತಿ - ವ್ಯಾಪ್ತಿಯನ್ನು ಅವಲಂಬಿಸಿದೆ. ಸತ್ವಯುತವಾದ ಶಿಕ್ಷಣ ಪದ್ಧತಿಯನ್ನು ಅನುಸರಿಸುವ ದೇಶದ ಸಮೃದ್ಧಿಯ ಹಾದಿಯನ್ನು ಹಿಡಿದರೆ, ದೋಷಪೂರಿತ ನಿಸ್ಸಾರ ಸಾಂಪ್ರದಾಯಿಕ ಶಿಕ್ಷಣ ಕ್ರಮಗಳಿಂದ ದೇಶ ಹಿಂದೆ ಸರಿಯುವುದು ಸಹಜವಾಗಿದೆ. ''ಸಾಮಾನ್ಯವಾಗಿ ಶಿಕ್ಷಣ ಮತ್ತು ರಾಷ್ಟ್ರೀಯ ಅಭಿವೃದ್ಧಿ'' (Education and National Development) ಒಂದಕ್ಕೊಂದು ಪೂರಕವಾಗಿ ಪರಸ್ಪರ ಪೋಷಣೆಯಿಂದ ಮುಂದುವರಿಯುತ್ತದೆ. ಹಿಂದೆ ರೂಢಿಯಾಗಿ ಒಂದು ದೇಶದ ಪ್ರಗತಿ-ಸಾಧನೆಯನ್ನು ಅಲ್ಲಿನ ಒಟ್ಟು ರಾಷ್ಟ್ರೀಯ ಉತ್ಪನ್ನ (G.N.P)ದ ಲೆಕ್ಕ ಮಾಡಿ ಸೂಚಿಸುತ್ತಿದ್ದರು. ಯಾವುದೇ ದೇಶದ ರಾಷ್ಟ್ರೀಯ ಉತ್ಪನ್ನ ಹೆಚ್ಚಿದರೂ, ಅದು ಸಮನಾಗಿ ಜನಪದಕ್ಕೆ ಹಂಚಿಕೆಯಾಗಿದೆ ಎಂದರ್ಥವಲ್ಲ. ಅದಕ್ಕಾಗಿ ರಾಷ್ಟ್ರದ ಅಭಿವೃದ್ಧಿ ಜನರ ಯೋಗಕ್ಷೇಮಗಳನ್ನು ಸೂಚಿಸುವ ಇತರ ಮಾಪನಗಳನ್ನು ಈಗ ಗುರುತಿಸಿದ್ದಾರೆ-ಅವುಗಳೇ ಜನರ ಆರೋಗ್ಯ ಶಿಕ್ಷಣದ ಗುಣಮಟ್ಟ-ವ್ಯಾಪ್ತಿ, ಕುಟುಂಬ ಕ್ಷೇಮ, ಜನರ ಕಲಾಭಿರುಚಿ, ಮನೋರಂಜನಾವಕಾಶ, ಇತ್ಯಾದಿ ಇವುಗಳು ಜನಪದದ ಸುಖಸಂತೋಷ-ನಲಿವನ್ನು ಅರ್ಥವಿಸುವ ಮಾನವ ಮಾಪನ ವಿಧಾನಗಳಾಗಿವೆ. ಒಟ್ಟಿನಲ್ಲಿ ರಾಷ್ಟ್ರದ ನಿಜವಾದ ಅಭಿವೃದ್ಧಿ ಮಾನವ ಸಂಪನ್ಮೂಲ (Human Resources)ಗಳ ಅಭಿವೃದ್ಧಿಯೇ ಆಗಿದೆ; ಮಾನವ ಸಂಪನ್ಮೂಲಗಳ ಅಭಿವೃದ್ಧಿ ಶಿಕ್ಷಣದಿಂದ ಮಾತ್ರ ಸಾಧ್ಯ. ಆದುದರಿಂದಲೇ ಬಹುಶಃ ಶಿಕ್ಷಣಖಾತೆಯನ್ನು ಕೇಂದ್ರದಲ್ಲಿ ''ಮಾನವ ಸಂಪನ್ಮೂಲ ಅಭಿವೃದ್ಧಿ'' ಸಚಿವ ಖಾತೆಯಾಗಿ ಹೆಸರಿಸಲಾಗಿದೆ. ಒಂದು ದೇಶದ ಅಭಿವೃದ್ಧಿಗೆ ಎರಡು ರೀತಿಯ ಸಂಪನ್ಮೂಲಗಳು ಅವಶ್ಯಕ; ಭೌತಿಕ ಸಂಪನ್ಮೂಲ, ಮಾನವ ಸಂಪನ್ಮೂಲ. ಶಿಕ್ಷಣದ ಮಹತ್ವವನ್ನು ಮನಗಂಡಾಗ ದೇಶದ ಸಂಪತ್ತು-ಸಮೃದ್ಧಿಯ ಮೂಲ ಅಲ್ಲಿನ ಭೌತಿಕ-ನೈಸರ್ಗಿಕ ಸಂಪನ್ಮೂಲಗಳಿಗಿಂತ ಒಳ್ಳೆಯ ಶಿಕ್ಷಣದಿಂದ ಲಭಿಸಿದ, ಅಲ್ಲಿನ ಜನರ ಜ್ಞಾನ-ಕೌಶಲ್ಯ-ಪ್ರೇರಣೆಗಳೇ ಎಂದು ನಾವು ತಿಳಿಯಬೇಕು.

- *ಶಿಕ್ಷಣದಲ್ಲಿ ಅಧ್ಯಾಪನಕ್ಕಿಂತ ಕಲಿಕೆಗೇ ಹೆಚ್ಚು ಪ್ರಾಧಾನ್ಯತೆ ಬಂದಿದ್ದು, ವಿಷಯಜ್ಞಾನ ನೀಡುವುದಕ್ಕಿಂತ ವಿದ್ಯಾರ್ಥಿಗಳೇ ಸ್ವಂತ ಓದಿ-ಮಾಡಿ ಕಲಿಯುವುದಕ್ಕೆ ಹೆಚ್ಚಿನ ಮಹತ್ವ ಬಂದಿದೆ.*
- *ಇಂದು ಸಾಂಪ್ರದಾಯಿಕ ಶಿಕ್ಷಣ ನೀಡುವ ಪ್ರಗತಿಪರ ಶಾಲೆ ವಿದ್ಯಾರ್ಥಿಗಳಿಗೆ ಮಾತ್ರ ಸೀಮಿತವಾಗಿರದೆ, ಶಾಲೆ-ಸಮಾಜಕ್ಕೆ ಪರಸ್ಪರ ಸೇವೆ - ಪ್ರಯೋಜನ ಪಡೆಯುವ ಸಮುದಾಯ ಕೇಂದ್ರ (Community Centre)ವಾಗಿದೆ.*
- *ಶಾಲಾ-ಕಾಲೇಜುಗಳಲ್ಲಿ ಲಭಿಸುವುದೇ ಶಿಕ್ಷಣವೆಂಬ ಸಂಕುಚಿತ ಅರ್ಥಮಾಯವಾಗಿದೆ. ಅದರ ಬದಲು ಮನುಷ್ಯಜೀವನ ಸಾರ್ಥಕಗೊಂಡು ಹಸನಾಗಲು ಆಜೀವ ಪರ್ಯಂತ ಶಿಕ್ಷಣ (Life Long Education)ದ ಕಲ್ಪನೆಯನ್ನು ಕಾರ್ಯಗತಗೊಳಿಸಲು ಸತತ ಪ್ರಯತ್ನ ನಡೆದಿದೆ.*

ಈ ನಿಟ್ಟಿನಲ್ಲಿ ರಾಷ್ಟ್ರೀಯ ಶಿಕ್ಷಣನೀತಿ (NPE-1986) ನಿರ್ದೇಶಿತ ಗುರಿಗಳು ಹೀಗಿವೆ:-

- *ನಮ್ಮ ರಾಷ್ಟ್ರೀಯ ದೃಷ್ಟಿಕೋನದಲ್ಲಿ ಶಿಕ್ಷಣವು ಎಲ್ಲರಿಗೆ ಸಾರ್ವತ್ರಿಕವಾಗ ಬೇಕಾಗಿದೆ.*
- *ಶಿಕ್ಷಣದಿಂದ ಸಂಸ್ಕೃತಿಯ ಸಂವಹನವಾಗಬೇಕಾಗಿದೆ.*
- *ವಿವಿಧ ಆರ್ಥಿಕ ರಂಗಕ್ಕೆ ಬೇಕಾದ ಮಾನವ ಸಂಪನ್ಮೂಲವನ್ನು ಶಿಕ್ಷಣ ಒದಗಿಸಬೇಕಾಗಿದೆ.*
- *ಒಟ್ಟಿನಲ್ಲಿ ಶಿಕ್ಷಣ ವರ್ತಮಾನ ಮತ್ತು ಭವಿಷ್ಯದಲ್ಲಿ ಇಡಬಹುದಾದ ವಿಶಿಷ್ಟ ಠೇವಣಿ.*

ಈ ಹಿನ್ನೆಲೆಯಲ್ಲಿ ಶಿಕ್ಷಣಕ್ಷೇತ್ರಕ್ಕೆ ಕಾಲಿರಿಸಿದ ಕೆಲವು ನವೀನ ಒಲವು (ಪ್ರವಣತೆ)ಗಳನ್ನು ವಿವೇಚಿಸುವುದು ಸೂಕ್ತವಾಗಿದೆ.

ಪ್ರಥಮವಾಗಿ 'ಪಠ್ಯವಸ್ತುವಿನ ನವೀಕರಣ' ಶಿಕ್ಷಣಲೋಕದಲ್ಲಿ ಆಗಾಗ ನಡೆಯುವುದನ್ನು ನಾವು ಕಾಣುತ್ತೇವೆ. ಇದು ಏಕೆ ? ಜಗತ್ತಿನಲ್ಲಿ ಎಲ್ಲ ವಿಷಯಗಳಲ್ಲಿ ಜ್ಞಾನದ ಸ್ಫೋಟವಾಗಿ 10-15 ವರ್ಷಗಳಲ್ಲಿ ಇಮ್ಮಡಿ ಯಾಗುವುದನ್ನು ಕಾಣಬಹುದು. ಇದಕ್ಕೆ ಹೊಂದಿಕೊಂಡು ಶಿಕ್ಷಣದ ವಿವಿಧ ಹಂತದಲ್ಲಿ ಪಠ್ಯವಸ್ತುವಿನ ಬದಲಾವಣೆಯಾಗುವುದು ಅನಿವಾರ್ಯ. ಕೇವಲ ಪುಸ್ತಕಜ್ಞಾನ ಪರಿಮಿತಿಯಲ್ಲಿರುವ ಪಠ್ಯವಸ್ತು - ಏಕಕೇಂದ್ರೀಯ ಹಾಗೂ ಏಕಮುಖವಾದ (ಪ್ರಾಥಮಿಕ, ಹೈಸ್ಕೂಲು, ಕಾಲೇಜು) ವಿಸ್ತರಣದ ಪಠ್ಯವಸ್ತುವಿನಿಂದ ವ್ಯಕ್ತಿಗಾಗಲೀ, ಸಮಾಜಕ್ಕಾಗಲೀ ಪ್ರಯೋಜನ ಸಿಗಲಾರದು. ಶಿಕ್ಷಣದ ಪ್ರತಿಯೊಂದು ಹಂತದಲ್ಲಿಯೂ ಕಲಿಸುವ ವಿಷಯದಿಂದ ವ್ಯಕ್ತಿಗೇನು ಪ್ರಯೋಜನ. ಸಮಾಜಕ್ಕೇನು ಲಾಭ - ಎಂಬ ಪ್ರಶ್ನೆಯನ್ನು ಕೇಳಿ ಉತ್ತರ ಪಡೆಯಬೇಕಾಗುತ್ತದೆ. ಪಠ್ಯವಸ್ತುವಿನ ವಿಷಯ (ಭಾಷೆ, ಗಣಿತ, ವಿಜ್ಞಾನ, ಚರಿತ್ರೆ, ಇತ್ಯಾದಿ) ಸುತ್ತಲಿನ ಸಮುದಾಯದ ಆಶೋತ್ತರಕ್ಕೆ ಹೊಂದಿಕೊಂಡಿರದೆ, ಪ್ರಾಯೋಗಿಕವಾಗಿ ಕೂಡಿರದಿದ್ದರೆ ಅಂತಹ ತಿಳುವಳಿಕೆಯಿಂದ ಏನೂ ಪ್ರಯೋಜನವಿಲ್ಲ. ಈ ದೋಷವನ್ನು ನಿವಾರಿಸಲು ನಾವು ಆಗಾಗ ಪಠ್ಯವಸ್ತುವನ್ನು ಹೆಚ್ಚೆಚ್ಚು ಪರಿಸರ ಪ್ರೇರಿತವಾಗಿ, ಅನುಭವ ಶೀಲವಾಗಿ ಭವಿಷ್ಯತ್ ಸಂವಾದಿಯಾಗಿ ಮಾರ್ಪಡಿಸುತ್ತೇವೆ. ಇದು ನಾಲ್ಕೈದು ವರ್ಷಕ್ಕೆ ನಡೆಯುವ ಪ್ರಕ್ರಿಯೆ.

ಕೇವಲ ಪಠ್ಯವಸ್ತುವಿನ ನವೀಕರಣವಾದರೆ ಸಾಲದು. ಕಲಿತ ಜ್ಞಾನ ವ್ಯಕ್ತಿಗತವಾಗಿ ಬಾಳಿನಲ್ಲಿ ಮೂಡಿಬರಬೇಕಾದರೆ ಶಿಕ್ಷಣದ ಮಾರ್ಗಮಾಧ್ಯಮಗಳು ಬದಲಾಗಬೇಕು. ಈ ದಿಸೆಯಲ್ಲಿ ಇತ್ತೀಚೆಗೆ 'ಶಿಕ್ಷಣದಲ್ಲಿ ವಿವಿಧತೆ' (Diversity in Education) ರೂಪುಗೊಂಡುದನ್ನು ಕಾಣಬಹುದು. ಎಲ್ಲರಿಗೂ ಏಕರೂಪದ ಶಿಕ್ಷಣಕ್ರಮವನ್ನು ಬಿಟ್ಟು, ಹಲವರ ಅಭಿರುಚಿ-ಆಸಕ್ತಿ-ಯೋಗ್ಯತೆಗಳಿಗನುಸಾರವಾಗಿ ವಿವಿಧ ವ್ಯಾಸಂಗ ವಿಷಯಗಳನ್ನು ಅಳವಡಿಸುತ್ತೇವೆ. ಸಮಾಜದ ನಾನಾ ಕೆಲಸಕಾರ್ಯಗಳಿಗೆ-ಉತ್ಕರ್ಷಕ್ಕೆ-ಸಮಸ್ಯೆಗಳ ಬಿತ್ತರಣಕ್ಕೆ - ವಿವಿಧ ರೀತಿಯ ಕುಶಲಿಗಳು, ಪ್ರವೀಣರು ನಮಗೆ ಅಗತ್ಯವಾಗಿಬೇಕು. ಇವರೆಲ್ಲಾ ಶಿಕ್ಷಣ ಕ್ಷೇತ್ರದಲ್ಲೇ ತಯಾರಾಗಬೇಕಾಗಿದೆ. ಅಂದರೆ ಶಿಕ್ಷಣದ ಒಂದು ಹಂತದಲ್ಲಿ ವ್ಯಕ್ತಿಯು ತನ್ನ ಆಸಕ್ತಿ-ಶಕ್ತಿಗನುಸರಿಸಿ ವೃತ್ತಿಪರ ತರಬೇತಿ ಪಡೆದು ಕ್ರಮೇಣ ವೃತ್ತಿಜೀವನವನ್ನು ಹಿಡಿಯಬೇಕಾಗುತ್ತದೆ. ಯಾವ ವ್ಯಕ್ತಿ ಯಾವ ಹಂತದಲ್ಲಿ ವೃತ್ತಿಶಿಕ್ಷಣ ಪಡೆಯಬೇಕು - ಎಂಬುದು ವೃತ್ತಿಶಿಕ್ಷಣಕ್ಕೆ ಸಂಬಂಧಿಸಿದ ಒಂದು ದೊಡ್ಡ ಸಮಸ್ಯೆ. ಶಾಲೆ-ಕಾಲೇಜುಗಳಲ್ಲಿ ವಿದ್ಯಾರ್ಥಿಗಳನ್ನು ವಿವಿಧ ಕಸಬುಗಳಿಗೆ ಆರಿಸುವುದು ಕಠಿಣ ಕೆಲಸವಾಗಿದೆ. ಅಲ್ಲದೆ ಸಮಾಜದಲ್ಲಿ ಯಾವ ವೃತ್ತಿಗೆ ಎಷ್ಟು ಮಂದಿ ಬೇಕೆಂಬುದು ನಿಗದಿ ಇಲ್ಲದೆ ಇರುವಾಗ, ವೃತ್ತಿಪರ ತರಬೇತಿಯ ಅಪವ್ಯಯವಾಗುವ ಸಂಭವವೂ ಇದೆ. ಆದುದರಿಂದ ಸಾಮಾನ್ಯ ಶಿಕ್ಷಣವಿರಲಿ, ವೃತ್ತಿಪರ ಶಿಕ್ಷಣವಿರಲಿ, ಶಿಕ್ಷಣದ ವಸ್ತುವಿಧಾನಗಳಲ್ಲಿ (ಪ್ರೈಮರಿಯಿಂದ ಪದವಿಯವರೆಗೆ) ಶ್ರಮದಾನ, ಕೈಗೆಲಸ, ವೃತ್ತಿಪರ ತರಬೇತಿ ಶಿಕ್ಷಣ ಮಾಧ್ಯಮವಾಗುವುದು ಇಂದಿನ ಒಲವು. ಅಂತಹ ಶಿಕ್ಷಣದಿಂದ ವ್ಯಕ್ತಿಯು ತನ್ನನ್ನು ತಾನು ತಿಳಿದು ಸ್ವಾವಲಂಬಿಯಾಗಿ ಮುಂದಕ್ಕೆ ಸ್ವತಂತ್ರ ಉದ್ಯೋಗಿಯಾಗಿ ಜೀವನ ನಿರ್ವಹಿಸಲು ಸಮರ್ಥನಾಗುತ್ತಾನೆ.

ಈ ಶೈಕ್ಷಣಿಕ ಪ್ರವಣತೆಯ ಫಲವಾಗಿಯೇ ಇಂದು ನಾವು ಶಾಲಾ ಪಾಠಪಟ್ಟಿಯಲ್ಲಿ ಕೈಗೆಲಸ (craft work) ಕಾರ್ಯಾನುಭವ (work experience) ಅಥವಾ ಸಾಮಾಜಿಕ ಉತ್ಪಾದನಾ ಕಾರ್ಯ (supw)ವನ್ನು ಸೇರಿಸಿದುದಾಗಿದೆ. ಇವುಗಳಿಗೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ಭಾಗವಹಿಸುವುದರಿಂದ ವಿದ್ಯಾರ್ಥಿಗಳಲ್ಲಿ ದುಡಿಮೆಯ ಬಗ್ಗೆ ಪೂಜನೀಯ ಬುದ್ಧಿ ಹುಟ್ಟುವುದು ಸಹಜವಾಗಿದೆ.

ಮಕ್ಕಳ ಶಿಕ್ಷಣಕ್ಕೆ ಸಂಬಂಧಿಸಿದ ಇನ್ನೊಂದು ವಿಶಿಷ್ಟ ಪ್ರವಣತೆ, ಚಟುವಟಿಕೆ ಆಧಾರಿತ ಪಠ್ಯವಸ್ತು ಪ್ರವಚನ ಕ್ರಮವಾಗಿದೆ. (Activity oriented & teaching curriculum). ಇದಕ್ಕೆ ನಾವು ಆಧುನಿಕ, ಪ್ರಗತಿಪರ ಪ್ರೈಮರಿ ಶಾಲೆಯೊಂದನ್ನು ಸಂದರ್ಶಿಸಬೇಕು. ಅಲ್ಲಿ ಮಕ್ಕಳು ಭಾಗವಹಿಸುವ ನಾನಾ ರೀತಿಯ ಚಟುವಟಿಕೆಗಳು ನಮ್ಮನ್ನು ಬೆರಗುಗೊಳಿಸುತ್ತವೆ. ಅಲ್ಲಿನ ಮಕ್ಕಳ ಶಾಲಾ ದಿನಚರಿ ಹಲವಾರು ಯೋಜಿತ ಚಟುವಟಿಕೆಗಳಿಂದ ಕೂಡಿದ್ದು, 'ಕೆಲಸ- ಕಲಿಕೆಗೂ - ಅಟಕ್ಕೂ' ಅಂತರ ಕಡಿಮೆಯಿರುತ್ತದೆ. ಕಾರಣ ಆಟದ ಸ್ಫೂರ್ತಿ, ಕೆಲಸದ ತತ್ಪರತೆ ಎಲ್ಲಾ ಚಟುವಟಿಕೆಗಳಲ್ಲಿ ಮೂಡಿಬಂದು ವಿದ್ಯಾರ್ಥಿಗಳು ಸಂತೋಷದಿಂದ ಕುಣಿದು ಕೂಡಿ ಕಲಿಯುತ್ತಾರೆ. ಅಂತಹ ಸನ್ನಿವೇಶದಲ್ಲಿ ಅಧ್ಯಾಪಕರು ಹಿನ್ನೆಲೆಯಲ್ಲಿ ನಿಂತ ಸೂತ್ರದಾರರಾಗುತ್ತಾರೆ. ಮಕ್ಕಳು ಮೇಲಿನ ಕ್ಲಾಸುಗಳಿಗೆ ಹೋದ ಹಾಗೆ, ಕಲಿಕೆ ಯೋಜನೆ (project) ರೂಪ ತಾಳುವುದು ಸಹಜ.

ಮಕ್ಕಳ ಪಾಠಪಟ್ಟಿಯಲ್ಲಿರುವ ಪ್ರಮುಖ ವಿಷಯಗಳಾದ ಗಣಿತ - ವಿಜ್ಞಾನ ಬೋಧನೆಗೆ ಕುರಿತಾದ ಪ್ರವಣತೆಯನ್ನು ಇಲ್ಲಿ ಪ್ರಸ್ತಾಪಿಸಬಹುದಾಗಿದೆ. ಶಿಕ್ಷಣದ ಗುರಿ ಮಕ್ಕಳ ವರ್ತನೆಯಲ್ಲಿ ಬದಲಾವಣೆಯನ್ನು ತರುವುದಾಗಿದೆ. ವಿಜ್ಞಾನ ಶಿಕ್ಷಣದ ಉದ್ದೇಶ ಇದೇ ಆಗಿದ್ದು, ಮಕ್ಕಳು ವೈಜ್ಞಾನಿಕವಾಗಿ ಆಲೋಚಿಸಲು ಭಾವಿಸಲು, ಕ್ರಿಯಾಶೀಲರಾಗಲು ಪ್ರೇರೇಪಿಸುವುದಾಗಿದೆ. ಇದನ್ನು





ಸಾಧಿಸಲು ವಿಜ್ಞಾನವನ್ನು ಹೇಳಿಕೊಡುವ ಹಾದಿ ಫಲಿತಾಂಶ ದೃಷ್ಟಿ (Product approach)ಯಿಂದ ಪ್ರೇರಿತವಾಗಿದ್ದು ಬಾಯಿಪಾಠವೆ ಪ್ರಮುಖ ಕಲಿಕೆಯ ವಿಧಾನವಾಯಿತು. ಈ ಮಾರ್ಗದಲ್ಲಿ ವಿಜ್ಞಾನದಿಂದ ಪಡೆದ ಫಲಿತಾಂಶ ಮುಖ್ಯವೆ ಹೊರತು, ವಿಜ್ಞಾನ-ಗಣಿತ ನಡೆದು ಬಂದ ದಾರಿ-ಪ್ರಯೋಗ ಮುಖ್ಯವಲ್ಲ. ವೈಜ್ಞಾನಿಕ ಸಂಗತಿ, ಸಂಖ್ಯೆ, ಸೂತ್ರ, ನಿಯಮ ಪ್ರಧಾನವೇ ಹೊರತು, ಅವು ಹೇಗೆ ಬಂದವು. ಏಕೆ ಬಂದವು ಎಂಬುದು ಮುಖ್ಯವಲ್ಲ. ಇದರ ಪರಿಣಾಮ ನೀರಸ ವಿಜ್ಞಾನ ಶಿಕ್ಷಣ ಎಂದು ಬೇರೆ ಹೇಳಬೇಕಾಗಿಲ್ಲ. ಇದಕ್ಕೆ ವ್ಯತಿರಿಕ್ತವಾದ ಇತ್ತೀಚೆಗಿನ ಒಲವು-ಮಾರ್ಗ ವೈಜ್ಞಾನಿಕ 'ಪ್ರಕ್ರಿಯೆಯ ದೃಷ್ಟಿ' (Process approach). ಈ ಮಾರ್ಗ ವಿಜ್ಞಾನಿಗಳು ಅನುಸರಿಸುವ ಮಾರ್ಗ. ಈ ದಾರಿ ಮನೋವೈಜ್ಞಾನಿಕವಾಗಿದ್ದು, ವಿಜ್ಞಾನ ಬೋಧನೆಗೆ ಉತ್ಕೃಷ್ಟವಾಗಿದೆ. ಇದನ್ನು ವೈಜ್ಞಾನಿಕ ಪದ್ಧತಿ ಎಂದೂ ಕರೆಯುವರು. ಈ ಮಾರ್ಗದಲ್ಲಿ ಕಲಿಯುವ ವ್ಯಕ್ತಿ ಮಟ್ಟ, ವಿಜ್ಞಾನಿಯಾಗಿ - ಹೇಗೆ ವಿಷಯವನ್ನು ಸಂಗ್ರಹಿಸಲಿ ಹೇಗೆ ಪರಿಶೀಲನೆ ಮಾಡಲಿ, ಹೇಗೆ ಪ್ರಯೋಗ ಮಾಡಲಿ, ಯಾವುದು ಸರಿ-ತಪ್ಪು, ಯಾವುದು ನೇರ ಅನ್ವೇಷಣೆಯ ಹಾದಿ. ಹೇಗೆ ಸಂಗ್ರಹಿಸಿದ ಮಾಹಿತಿಯನ್ನು ವರದಿ ಮಾಡಲಿ- ಎಂದು ಮುಂದುವರಿಯುತ್ತಾನೆ. ಈ ರೀತಿಯ ಜ್ಞಾನಸಂಗ್ರಹ ಸ್ವತಃ ಶೋಧನ ಪದ್ಧತಿ (Discovery approach)ಯಿಂದ ವಿದ್ಯಾರ್ಥಿಗೆ ಲಭಿಸುತ್ತದೆ.

ಶಾಲಾ ಶಿಕ್ಷಣವನ್ನು ಮಕ್ಕಳಿಗೆ ಆಕರ್ಷಕವಾಗಿ ಮಾಡಲು ಕೈಕೊಂಡ ಇನ್ನೊಂದು ಪ್ರಯತ್ನವೇ ''ಗುಂಪು ಅಧ್ಯಾಪನ'' (Team teaching). ಒಂದು ಶಾಲೆಯಲ್ಲಿರುವ ಮಾನವ ಮತ್ತು ಭೌತಿಕ ಸಂಪನ್ಮೂಲಗಳ ಅತಿ ಹೆಚ್ಚಿನ ಸದುಪಯೋಗ ಈ ಮಾರ್ಗದಿಂದ ಸಾಧ್ಯವಿದೆ. ಶಿಕ್ಷಣದಲ್ಲಿ ಪರಂಪರೆಯ ವಿಧಾನ ಒಂದು ಕ್ಲಾಸ್ - ಒಂದು ವಿಷಯ - ಒಬ್ಬ ಅಧ್ಯಾಪಕರ ಈ ವ್ಯವಸ್ಥೆಯ ಚೌಕಟ್ಟನ್ನು ಮೀರಲು ಗುಂಪು ಅಧ್ಯಾಪನದಿಂದ ಸಾಧ್ಯವಿದೆ. ಈ ನೂತನ ವಿಧಾನದಲ್ಲಿ ಒಂದು ಪಾಠಪ್ರವಚನ (ಉದಾ: 'ಚಂದ್ರಗ್ರಹಕ್ಕೆ ಪ್ರಯಾಣ' ವೆಂಬ ಭಾಷಾ ಪಾಠ) ಕಾರ್ಯದಲ್ಲಿ ಭಾಷೆ, ವಿಜ್ಞಾನ, ಗಣಿತದ ಅಧ್ಯಾಪಕರು ಭಾಗವಹಿಸಿ, ವಿಷಯದ ವಿಸ್ತಾರ - ಅಗಾಧತೆಯನ್ನು ಮಕ್ಕಳಿಗೆ ಮನದಟ್ಟು ಮಾಡಿಕೊಡುತ್ತಾರೆ. ಹೀಗೆ ಗುಂಪು ಅಧ್ಯಾಪನದಲ್ಲಿ ವೇಳಾಪಟ್ಟಿಯ ಆತಂಕವಿಲ್ಲದೆ ಅಧ್ಯಾಪಕರ ಆಸಕ್ತಿ - ಪರಿಣತಿಯನ್ನು ಅನುಸರಿಸಿ ಪಾಠಪ್ರವಚ ನಡೆಯುತ್ತದೆ. ಹಾಗೆಯೇ ವಿದ್ಯಾರ್ಥಿಗಳು ತಮ್ಮ ಅಗತ್ಯ-ಅಭಿರುಚಿಗನುಸರಿಸಿ ಕಲಿಕೆಯಲ್ಲಿ ಭಾಗವಹಿಸುತ್ತಾರೆ. ಅಧ್ಯಾಪಕರಿಗೆ ಸೂಕ್ತ ತರಬೇತಿ ನೀಡಿದಲ್ಲಿ ''ಗುಂಪು ಅಧ್ಯಾಪನ'' ಹೆಚ್ಚಿನ ಖರ್ಚಿಲ್ಲದೆ ಶಿಕ್ಷಣದ ಗುಣಮಟ್ಟವನ್ನು ಎತ್ತರಿಸಲು ಒಂದು ಸಹಕಾರಿ ಮಾರ್ಗವಾಗಿದೆ.

ಈಚೆಗೆ ಶಿಕ್ಷಣಕ್ಷೇತ್ರಕ್ಕೆ ಕಾಲಿರಿಸದ ಒಂದು ನವೀನ ಅವಿಷ್ಕಾರ ''ಜನಸಂಖ್ಯಾ ಶಿಕ್ಷಣ''. ಜನಸಂಖ್ಯಾ ಒತ್ತಡ - ಸಮಸ್ಯೆ ಇಂದು ಮಾನವಕುಲ ಎದುರಿಸುವ ಒಂದು ಗಂಭೀರ ಸಮಸ್ಯೆಯಾಗಿದೆ. ಇದನ್ನು ಪರಿಹರಿಸಲು ವೈದ್ಯಕೀಯ ಮಾರ್ಗ ಮಾತ್ರ ಸಾಲದು; ಅದು ಶಿಕ್ಷಣಕ್ಕೂ ಸಂಬಂಧಿಸಿದ ಸವಾಲಾಗಿದೆ. ಕಾರಣ ಇಂದಿನ ವಿದ್ಯಾರ್ಥಿಗಳು ನಾಳೆಯ ತಂದೆ ತಾಯಿಗಳು. ಅವರು ವಿದ್ಯಾರ್ಜನೆ ಪಡೆಯುವಾಗಲೀ ಜನಸಂಖ್ಯೆಯ ಸ್ವರೂಪ, ಒತ್ತಡ, ಕಾರಣ - ಪರಿಣಾಮಗಳ ಕುರಿತು ತಿಳಿಯಬೇಕಾದುದು ಅಗತ್ಯ. ವಿದ್ಯಾರ್ಥಿಗಳು ಶಾಲೆ - ಕಾಲೇಜುಗಳಲ್ಲಿ ಕಲಿಯುವ ವಿಷಯಗಳ ಮೂಲಕವೇ ಅವರಲ್ಲಿ ಜನಸಂಖ್ಯಾ ಪ್ರಜ್ಞೆಯನ್ನು ನಾವು ಮೂಡಿಸ ಬಲ್ಲವಾದರೆ, ಮುಂದಕ್ಕೆ ಅವರು ಜವಾಬ್ದಾರಿಯುತರಾಗಿ ಮಿತ ಕುಟುಂಬವನ್ನು ಹೊಂದುವುದರಲ್ಲಿ ಸಂದೇಹವಿಲ್ಲ. ಜನಸಂಖ್ಯೆಗೆ ಸಂಬಂಧಿಸಿದ ಪ್ರಸ್ತಾಪಗಳು ಪಠ್ಯವಸ್ತುವಿನಲ್ಲಿ ಅಲ್ಲಲ್ಲಿ ಸೇರಿಕೊಂಡಿವೆ. ಅವುಗಳನ್ನು ಸಮನ್ವಯ (Integration) ಪದ್ಧತಿಯಲ್ಲಿ ಒತ್ತುಕೊಟ್ಟು ಹೇಳುವುದರಿಂದ ವಿದ್ಯಾರ್ಥಿಗಳಲ್ಲಿ ಜನಸಂಖ್ಯಾ ಪ್ರಜ್ಞೆಯನ್ನು ಹುಟ್ಟಿಸಬಹುದು. ಈ ರೀತಿಯ ಅಧ್ಯಾಪನ - ಕಲಿಕೆ, ಶಿಕ್ಷಣವನ್ನು ಅನುಭವ ಹಾಗೂ ಪರಿಸರ ಪ್ರೇರಿತವಾಗುವುದರ ಮೂಲಕ ಅರ್ಥಪೂರ್ಣವಾಗಿ ಮಾಡಿದೆ.

ಸ್ವಂತ ಕಲಿಕೆಯ ಸಾಧನಗಳು. ಅಧ್ಯಾಪನ ಯಂತ್ರಗಳು (Auto Instructional Devices & Teaching machines) ಇಂದು ವ್ಯಕ್ತಿಯ ಕಲಿಕೆಯಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಕ್ರಾಂತಿಯನ್ನುಂಟು ಮಾಡಿವೆ. ಈ ದಿಸೆಯಲ್ಲಿ ಸಂಚಿತ ಕಲಿಕೆಯ ಸರಣಿ (Programme Instruction Material). ಶಿಕ್ಷಣದ ಗಣಕೀಕರಣ (Computerised Instruction)ವನ್ನು ಉದಾಹರಿಸಬಹುದು. ಶೈಕ್ಷಣಿಕ ತಂತ್ರಜ್ಞಾನ (Educational Technology) ಇಂದು ಕ್ಲಾಸ್ ಕೊಠಡಿಯ ಸ್ವರೂಪವನ್ನೇ ಕ್ರಾಂತಿಕಾರವಾಗಿ ಬದಲಾಯಿಸಿದೆ - ಎಂಬುದು ಗಮನಾರ್ಹ. ಪ್ರತಿಯೊಬ್ಬ ವ್ಯಕ್ತಿಯೂ ತನ್ನದೇ ಆದ ವೇಗದಲ್ಲಿ ಕಲಿಯಬಲ್ಲ; ಆಗ ಸ್ವಂತ ಕಲಿಕೆಯ ಸಾಧನಗಳು ತುಂಬಾ ಉಪಕಾರಿಯಾಗುತ್ತವೆ. ಕಲಿತ ವಿಷಯ ಹೆಚ್ಚು ಮನದಟ್ಟಾಗಲು, ಸ್ವಂತ ಓದನ್ನು ಮುಂದುವರಿಸುವವರು ಅಧ್ಯಾಪಕರ ನೆರವಿಲ್ಲದೆ ಇಂತಹ ಸೌಕರ್ಯಗಳಿಂದ ಶಿಕ್ಷಣಾವಕಾಶ ಪಡೆಯಲು ಇಂದು ಸಾಧ್ಯವಿದೆ. ಅಲ್ಲದೆ ಈ ಬೆಳವಣಿಗೆಯಿಂದ ಇಂತಹ ತಂತ್ರಜ್ಞಾನ ಹಾಗೂ ಸ್ವಂತ ಕಲಿಕೆಯ ಸಾಧನಗಳ ಮೂಲಕ ಪರಿಣತ ಮೇಧಾವಿ ಶಿಕ್ಷಕರ ಅಧ್ಯಾಪನ ವ್ಯಾಪಕ ವಿದ್ಯಾರ್ಥಿವೃಂದಕ್ಕೆ ಲಭ್ಯವಾದಂತಾಯಿತು.

ಇನೊಂದು ಮುಖ್ಯ ಶೈಕ್ಷಣಿಕ ಒಲವು : ಈಗ ಶಾಲೆ, ಕಾಲೇಜುಗಳಿಂದಲೇ ಶಿಕ್ಷಣ ಪಡೆಯಬೇಕಾಗಿಲ್ಲ. ಇಂತಹ

ಔಪಚಾರಿಕ ಶಿಕ್ಷಣಕ್ರಮಕ್ಕೆ ಸಮನಾಗಿ 'ಅನೌಪಚಾರಿಕ ಶಿಕ್ಷಣ' ಹೆಚ್ಚೆಚ್ಚು ಪ್ರಚಾರಕ್ಕೆ ಬಂದುದು ಇತ್ತೀಚೆಗಿನ ದಾಖಲೆಯಾಗಿದೆ. ಔಪಚಾರಿಕ ಶಿಕ್ಷಣದಿಂದ ವಂಚಿತರಾದವರಿಗೆ ಬಯಲು ವಿಶ್ವವಿದ್ಯಾನಿಲಯ, ಸಂಜೆ ತರಗತಿಗಳು, 'ಕೆಲಸಗಾರ-ಶಿಕ್ಷಣ-ತರಗತಿಗಳು', (Workers, Education classes) ಬಯಲು ಶಾಲಾ ಶಿಕ್ಷಣ ವ್ಯವಸ್ಥೆ (Open School system) ಇತ್ಯಾದಿ ಶಿಕ್ಷಣ ಮುಂದುವರಿಸಲು ಯೋಗ್ಯ ಅವಕಾಶವನ್ನುಂಟು ಮಾಡಿದೆ. ಯಾವನೇ ಒಬ್ಬ ವ್ಯಕ್ತಿ ಯಾವ ಪ್ರಾಯದಲ್ಲಿಯೇ ಆಗಲಿ ಶಿಕ್ಷಣದ ಅಗತ್ಯ ಮತ್ತು ಅದರ ಬಗ್ಗೆ ಕಾತರ ಇದ್ದಲ್ಲಿ ಬೇಕಾದ ಶಿಕ್ಷಣ ಪಡೆಯುವ ಅವಕಾಶ ''ಬಯಲು ಶಿಕ್ಷಣ ವ್ಯವಸ್ಥೆ''ಯಲ್ಲಿದೆ. ಇಂತಹ ದೂರ ಶಿಕ್ಷಣದ ವ್ಯಾಪ್ತಿ ಮತ್ತು ಗುಣಮಟ್ಟವನ್ನು ವಿಸ್ತರಿಸಲು ಆಕಾಶವಾಣಿ ಮತ್ತು ದೂರದರ್ಶನ ಕೊಡುಗೆ ಅಪಾರವಾದುದು. ಭವಿಷ್ಯದಲ್ಲಿ ಅನೌಪಚಾರಿಕ ಶಿಕ್ಷಣಮಾರ್ಗ ಇನ್ನೂ ವಿಸ್ತಾರಗೊಂಡು, ಔಪಚಾರಿಕ ಕ್ಷೇತ್ರಕ್ಕೆ ಪೂರಕವಾಗಿ, ಸಮಸ್ತ ಜನಪದವನ್ನು ಪ್ರಭಾವಿತಗೊಳಿಸುವ ಚಿಹ್ನೆಯನ್ನು ನಾವು ಕಾಣುತ್ತಲಿದ್ದೇವೆ. ಯಾವುದೇ ಒಬ್ಬ ವ್ಯಕ್ತಿಗೆ ಅಥವಾ ಗುಂಪಿಗೆ ಅಗತ್ಯವಾದ ಶಿಕ್ಷಣವನ್ನು ಒದಗಿಸಬಲ್ಲ ಬಹುರೂಪಿ ಶಿಕ್ಷಣ ಮಾಧ್ಯಮ ಸಂಚಿಕೆ (Multi Media Package) ಈಗ ಲಭ್ಯವಿದೆ; ಇದು ಬರಲಿರುವ ಸಾರ್ವತ್ರಿಕ ಶಿಕ್ಷಣದ ಮುನ್ಸೂಚನೆಯಾಗಿದೆ. ಶಿಕ್ಷಣಶಾಸ್ತ್ರದಲ್ಲಿ ದೂರಶಿಕ್ಷಣ (Distance Education), ಶಿಕ್ಷಣ ತಂತ್ರ ವಿಜ್ಞಾನ ದೇಶದ ನಾನಾ ಮೂಲೆಗಳನ್ನು ಮುಟ್ಟುವಷ್ಟು ಮುಂದುವರಿದಿದೆ ಮತ್ತು ಮುಂದುವರಿಯುತ್ತಲೇ ಇದೆ.

ಇಲ್ಲಿ ಒಂದು ಪ್ರಶ್ನೆ - ಶಿಕ್ಷಣ ತಂತ್ರಜ್ಞಾನದಿಂದ ಶಿಕ್ಷಕ ತರಗತಿಯ ಕೊಠಡಿಯಿಂದ ಕಣ್ಮರೆಯಾಗುವನೆ ? ಇಲ್ಲ. ಅದರ ಬದಲು ಶಿಕ್ಷಕನ ಸ್ಥಾನಮಾನ-ವ್ಯಕ್ತಿತ್ವ-ವರ್ಚಸ್ಸು ಹೆಚ್ಚಾಗಿ ಅವನ ತರಬೇತಿ ವಿಶಿಷ್ಟವಾಗಿ ಮಾರ್ಪಡುತ್ತದೆ. ಕ್ಲಾಸ್ ಸನ್ನಿವೇಶದಲ್ಲಿ ಅಧ್ಯಾಪನ-ಕಲಿಕೆ ಮಾನವ ಸಂಪರ್ಕದಿಂದ ಹೆಚ್ಚಿನ ಪ್ರೇರಣೆ - ಸ್ಫೂರ್ತಿಯನ್ನು ಪಡೆಯುವಂತಾಗುತ್ತದೆ. ಯಾವ ಯಂತ್ರವೂ - ತಂತ್ರವೂ ಶಿಕ್ಷಣ ವ್ಯಾಪಾರದಲ್ಲಿ ಮಾನವ ಸ್ಪರ್ಶ (Human touch)ವನ್ನು ನೀಡಲಾರದು. ಆದುದರಿಂದಲೇ ಶ್ರೇಷ್ಠ ಅಧ್ಯಾಪಕರ ಪ್ರಭಾವ, ಸ್ಫೂರ್ತಿ ಚಿರಂತನವಾಗಿದ್ದು ಅವರ ಹೆಜ್ಜೆಯ ಗುರುತುಗಳನ್ನು ಕಾಲದ ಕಿನಾರೆಯಲ್ಲಿ ನಾವು ಇಂದಿಗೂ ಗುರುತಿಸಬಲ್ಲೆವು.

ಇಷ್ಟರವರೆಗೆ ನಾನು ಶಿಕ್ಷಣ ಕ್ಷೇತ್ರವನ್ನು ಪ್ರಭಾವಿತಗೊಳಿಸಿದ ಕೆಲವು ಪ್ರಸ್ತಾಪ-ಪ್ರವಣತೆಗಳ ಕುರಿತು ಹೇಳಿದ್ದೇನೆ. ಇವುಗಳ ಒಟ್ಟುಗುರಿ - ಅಧ್ಯಯನ ಶೀಲ ಸಮಾಜ (Learning Society)ವನ್ನು ನಿರ್ಮಾಣ ಮಾಡುವುದಾಗಿದೆ. ಈ ಉದ್ದೇಶ ಸಾಧನೆಯಲ್ಲಿ ಶಿಕ್ಷಣಾಸಕ್ತರ ಕಾರ್ಯ-ಧೋರಣೆ -ಆಚರಣೆ ಹೀಗೆ ಸಾಗಲಿ:-

- *ಶಿಕ್ಷಣ ಮಕ್ಕಳಿಗೆ ತರುಣರಿಗೆ ಮಾತ್ರವಲ್ಲ, ವಯಸ್ಕರಿಗೂ ಸಿಗುವಂತಾಗಲಿ. ಅದು ಪ್ರತಿಯೊಬ್ಬನ ಜನ್ಮಸಿದ್ಧ ಹಕ್ಕು.*
- *ಶಿಕ್ಷಣ ಮತ್ತು ಕೆಲಸ (ವೃತ್ತಿ) ಪರಸ್ಪರ ಪೂರಕವಾಗಿದ್ದು ವ್ಯಕ್ತಿಯ ಜೀವನ ಪರ್ಯಂತ ಪಸರಿಸಲಿ.*
- *ಶಿಕ್ಷಣ ವ್ಯವಸ್ಥೆಯಲ್ಲಿ ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣ ಕ್ರಮಗಳಿಗೆ ಸಮಾನವಾದ ಸ್ಥಾನ, ಮಾನ, ಅವಕಾಶಗಳು ಸಿಗುವಂತಾಗಲಿ.*
- *ಶಿಕ್ಷಣ ಶಾಲೆಯ ನಾಲ್ಕು ಗೋಡೆಗಳ ಮಧ್ಯೆ ನಡೆಯುವ ಪ್ರಕ್ರಿಯೆಯಾಗಿರದೆ, ಅದರ ವ್ಯಾಪ್ತಿ ಶಾಲೆಯ ಒಳಗೆ - ಹೊರಗೆ - ಸಮಾಜದಲ್ಲಿ ವ್ಯಕ್ತಿಯು ಗಳಿಸುವ ಎಲ್ಲಾ ಕಲಿಕೆಯ ಅನುಭವಗಳಿಗೆ ವಿಸ್ತರಿಸಲಿ.*
- *ವಿವಿಧ ಶಿಕ್ಷಣ, ವೃತ್ತಿಪರ ಶಿಕ್ಷಣ, ಗುಣಮಟ್ಟದ ಶಿಕ್ಷಣ - ಎಲ್ಲರಿಗೂ ಅವರವರ ಆಸಕ್ತಿ, ಅಭಿರುಚಿ, ಶಕ್ತಿಗನುಸರಿಸಿ ಸಿಗುವಂತಾಗಲಿ.*
- *ಶಿಕ್ಷಣ ಒಂದು ಪ್ರಮುಖ ಸಾಮಾಜಿಕ ಜವಾಬ್ದಾರಿಯಾಗಿ ಅದರಲ್ಲಿ ಎಲ್ಲರೂ (ಆಡಳಿತಗಾರ, ವಿದ್ಯಾರ್ಥಿ ಇಲ್ಲವೇ ಶಿಕ್ಷಕರಾಗಿ) ಪಾಲುಗೊಳ್ಳುವಂತಾಗಲಿ.*

ಹೀಗೆ ನಮ್ಮ ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆ ನವೀನ ಒಲವುಗಳನ್ನು ಒಳಗೊಂಡು ರೂಪುಗೊಂಡರೆ ಸಮಾಜ ಮತ್ತು ಶಿಕ್ಷಣ ಪರಸ್ಪರ ಪೋಷಣೆ, ಪ್ರಯೋಜನ, ಸ್ಫೂರ್ತಿಯನ್ನು ಪಡೆದು, ಪ್ರಗತಿಯ ಹಾದಿ ಹಿಡಿಯುತ್ತದೆ; ಪರಿಣಾಮ - ರಾಷ್ಟ್ರದ ಸರ್ವತೋಮುಖ ಅಭಿವೃದ್ಧಿ. ಇಲ್ಲಿ ಚೀನಾದ ಒಂದು ಪುರಾತನ ಗಾದೆಯನ್ನು ಸ್ಮರಿಸಬಹುದಾಗಿದೆ:

*''ನೀವು ಒಂದು ವರ್ಷಕ್ಕೆ ಯೋಜಿಸುವುದಾದರೆ ಒಂದು ಗಿಡವನ್ನು ನೆಡಿರಿ. ಹತ್ತು ವರ್ಷಕ್ಕೆ ಯೋಜಿಸುವುದಾರೆ ಒಂದು ಮರವನ್ನು ನೆಡಿರಿ. ಒಂದು ನೂರು ವರ್ಷಕ್ಕೆ ಯೋಜಿಸುವುದಾದಲ್ಲಿ ಮನುಷ್ಯನಿಗೆ ಶಿಕ್ಷಣ ನೀಡಿರಿ.''*

O





# ಶೂನ್ಯಸಂಪಾದನೆ – ನೂರು ಪ್ರವಚನ

ಪ್ರೊ. ಹೆಚ್.ವಿ. ವೀರಭದ್ರಯ್ಯ

ಶೂನ್ಯ ಸಂಪಾದನೆಯ ಎಂದರೆ ಆತ್ಮಜ್ಞಾನ ಸಂಪಾದನೆ, ಆತ್ಮ ಸಾಕ್ಷಾತ್ಕಾರ, ತನ್ನ ತಾನರಿತ ಕಲೆ. ಬೆಳಗಿನೊಳಗಣ ಬೆಳಗ ಕಾಂಬ ತಪಸ್ಸು. ಬಯಲು ಬಯಲಾಗುವ ರಹಸ್ಯ. ಘನತಮಂಧದಿಂದ ಬೆಳಕಿನತ್ತ ನಡೆವ ಮಾರ್ಗ. ಇಹವನ್ನು ತಿರಸ್ಕರಿಸದೆ ಪರವನ್ನು ಸಾಧಿಸುವ ವಿದ್ಯೆ. ಇಲ್ಲಿ ಸಲ್ಲುವ ಬದುಕು. ಭ್ರಮೆಯ ನಿರಸನ ಮಾಡಿಕೊಳ್ಳುವ ವಿಧಾನ. ಜೀವನೋತ್ಸಾಹದ ಸಂಭ್ರಮ. ತತ್ವವನ್ನರಿಯುವ, ಸತ್ಯವನ್ನರಸುವ ಪ್ರಯೋಗ.

'ಶೂನ್ಯ ಸಂಪಾದನೆ' ಎಂಬುದು ವಚನ ಸಾಹಿತ್ಯದಲ್ಲರಳಿದ ವಿಶಿಷ್ಟ ಸೃಷ್ಟಿ, ವಚನಗಳು ಯಾವುದೇ ಒಂದು ಸಂದರ್ಭದಲ್ಲಿ ಮೂಡಿಬಂದವುಗಳಲ್ಲ. ಹಲವಾರು ಸಂದರ್ಭಗಳಲ್ಲಿ ಸ್ಫುರಣಗೊಂಡ ಸಾಹಿತ್ಯ ಸೊಡರುಗಳು. ಆ ಸಾಹಿತ್ಯ ಅನುಭಾವ ಜಗ್ಗೆ ಸಂಬಂಧಿಯಾದುದು. 'ಆತ್ಮವಾತ್ಮ ಮಥಿಸಿ' ಬಂಧಂಥದು. ಲೋಕ ಜೀವನದ ಪರಿಪೂರ್ಣತೆಯನ್ನು ಸಾಧಿಸಿದ್ದು. ಶರಣಧರ್ಮದ ಪರಿಣಿತ ಫಲ ಶೂನ್ಯ ಸಂಪಾದನೆ.

ಹನ್ನೆರಡನೆ ಶತಮಾನದ ವಚನಗಳು ಸತ್ಯಶೋಧದ ಹಾದಿಯಲ್ಲಿ ದೀಪದ ಹೆಜ್ಜೆಯನ್ನು ಮೂಡಿಸಿದವು. ಅವುಗಳ ತೆರೆದಿಟ್ಟ ಜೀವನಮೌಲ್ಯ ಮತ್ತು ಆದರ್ಶಗಳು ಸಾರ್ವಕಾಲಿಕ ಪ್ರಸ್ತುತಗಳು. ಆ ಸಾಹಿತ್ಯ ಸಂಪತ್ತಿನ ರತ್ನಗರ್ಭದಿಂದ ಹೆಕ್ಕಿ ತೆಗೆದ ಶೂನ್ಯಸಂಪಾದನೆ ಪ್ರತಿಭಾ ಚಾಕ್ಷುಸ ದೃಷ್ಟಿಗೆ ನಟ್ಟಕಲ್ಲೆನಿಸದೆ ಸುಳಿವ ಶಾಸನದ ರೂಪದಲ್ಲಿ ಎದ್ದುನಿಂತ ಪವಿತ್ರರೂಪಿ. ಶಿವಗಣ ಪ್ರಸಾದಿ ಮಹಾದೇವಯ್ಯ ಶರಣಜೀವಿ. ಪ್ರತಿಭಾ ಚೇತನ. ಶೂನ್ಯ ಸಂಪಾದನೆಯನ್ನು ಕಟ್ಟಿಕೊಟ್ಟ ಮಹಾನುಭಾವ. ಶೂನ್ಯ ಸಂಪಾದನೆಗೆ ಒಂದರ್ಥದಲ್ಲಿ ಸೃಷ್ಟಿ, ಇನ್ನೊಂದು ದೃಷ್ಟಿಯಿಂದ ಪರಿಭಾವಿಸಿದಾಗ ಅನುಸೃಷ್ಟಿ, 'ಮಡಕೆಯ ಮಾಡುವೊಡೆ ಮಣ್ಣೇ ಮೊದಲು' ಎಂಬಂತೆ ಶೂನ್ಯಸಂಪಾದನೆ ಗ್ರಂಥ ಸೃಷ್ಟಿಗೆ ಶರಣರ ವಚನಗಳೇ ಮೂಲ. ಶಿವಗಣ ಪ್ರಸಾದಿ ಮಹಾದೇವಯ್ಯನವರು ಪ್ರಸಾದಿಗಳು. ಅವರದು ಪ್ರಸಾದಭಾವ, ಪ್ರಸಾದ ದೃಷ್ಟಿ, ಪ್ರಸಾದ ಸೃಷ್ಟಿ, ವಚನಗಳು ಪ್ರಸಾದ ಜೀವನದ ಪಕ್ವ ಫಲಗಳು. ಪದಾರ್ಥ ಜೀವನಕ್ಕೂ ಪ್ರಸಾದ ಜೀವನಕ್ಕೂ ಸಮನ್ವಯ ಸೇತುವಾದ ಮಾಧ್ಯಮಗಳು. ಶಿವಗಣ ಪ್ರಸಾದಿ ಮಹಾದೇವಯ್ಯ ಗಳು ತಾವು ಕಂಡುಂಡ ಅನುಭಾವದ ರಸದುಣಿಸನ್ನು ಲೋಕಕಲ್ಯಾಣಕ್ಕಾಗಿ ಪ್ರಸಾದ ಗೊಳಿಸಿದ್ದರ ಫಲವೇ 'ಶೂನ್ಯಸಂಪಾದನೆ'. ಲೋಕದ ಅದ್ಭುತ ವಿಸ್ಮಯಗಳಲ್ಲೊಂದು. ವಚನ ಮುತ್ತು ಮಾಣಿಕ್ಯ ರತ್ನಗಳಿಂದ ಕಟ್ಟಿ ಕಡೆದು ನಿಲ್ಲಿಸಿದ ಸಾಹಿತ್ಯಸೌಧ. ಅನುಭಾವದ ಅವರವಟಿಗೆ, 'ಮಹಾನುಭಾವ ಪ್ರಸಂಗ'.

ಶಿವಗಣ ಪ್ರಸಾದಿ ಮಹಾದೇವಯ್ಯಗಳ ನಂತರ ಹಲಗೆಯ ದೇವರು, ಗುಮ್ಮಳಾಪುರದ ಸಿದ್ಧಲಿಂಗಯತಿ, ಗೂಳೂರು ಸಿದ್ಧವೀರಣ್ಣೊಡೆಯರು, ಶೂನ್ಯಸಂಪಾದನೆಯನ್ನು ಪರಿಷ್ಕರಿಸಿದರು.

'ಶೂನ್ಯಸಂಪಾದನೆ' ಮೊದಲು ಪ್ರಕಟವಾದುದು ೧೯೩೦ರಲ್ಲಿ. ಅದು ಗೂಳೂರು ಸಿದ್ಧವೀರಣ್ಣನವರ ಕೃತಿ. ಸಂಪಾದಿಸಿದವರು ಡಾ ॥ ಫ.ಗು. ಹಳಕಟ್ಟಿ ಅವರು. ಅದನ್ನೇ ಪರಿಷ್ಕರಿಸಿ ಪ್ರೊ. ಸಂ.ಶಿ. ಭೂಸನೂರು ಮಠರು ೧೯೫೮ರಲ್ಲಿ ಪ್ರಕಟಿಸಿದರು. ಅದು ಮತ್ತೆ ೧೯೬೫ ಮತ್ತು ೧೯೮೬ರಲ್ಲಿ ಮರು ಮುದ್ರಿತವಾಯಿತು. ೧೯೬೯ರಲ್ಲಿ ಮೊಟ್ಟಮೊದಲಿಗೆ ಶಿವಗಣ ಪ್ರಸಾದಿ ಮಹಾದೇವಯ್ಯಗಳ ಕೃತಿ ಡಾ ॥ ಎಲ್. ಬಸವರಾಜು ಅವರಿಂದ ಪ್ರಕಟವಾಯಿತು. ಡಾ ॥ ಆರ್.ಸಿ. ಹಿರೇಮಠರು ಅದನ್ನೇ ೧೯೭೧ರಲ್ಲಿ ಸಂಪಾದಿಸಿ ಕರ್ನಾಟಕ ವಿಶ್ವವಿದ್ಯಾನಿಲಯದ ಮೂಲಕ ಪುನಃ ಪ್ರಕಟಿಸಿದರು. ೧೯೭೨ರಲ್ಲಿ ಗುಮ್ಮಳಾಪುರದ ಸಿದ್ಧಲಿಂಗ ಯತಿಗಳ ಕೃತಿಯನ್ನು ಡಾ ॥ ಆರ್.ಸಿ. ಹಿರೇಮಠರು ಪ್ರಕಟಿಸಿದರು. ಹಲಗೆಯಾರ್ಯನ ಕೃತಿಯನ್ನು ಡಾ ॥ ಎಸ್. ವಿದ್ಯಾಶಂಕರ್ ಮತ್ತು ಪ್ರೊ ॥ ಜಿ.ಎಸ್. ಸಿದ್ಧಲಿಂಗಯ್ಯನವರು ಮೊಟ್ಟ ಮೊದಲಿಗೆ ಪ್ರಕಟಿಸಿದರು.

ಶೂನ್ಯ ಸಂಪಾದನೆಯ ಕೇಂದ್ರಬಿಂದು ಅಲ್ಲಮಪ್ರಭು. ಆದರೆ ಬಸವಣ್ಣನವರೇ ಕೃತಿಯ ನಾಯಕರೆಂಬಂತೆ ಕೃತಿಯ ಮುಕ್ತಾಯವಾಗುವುದು ಅದರ ಸ್ವಾರಸ್ಯ. ಅಜಗಣ್ಣ (ಜಗಣ್ಣನಲ್ಲ) ಮುಕ್ತಾಯಕ್ಕ, ಸಿದ್ಧರಾಮ, ಚೆನ್ನಬಸವಣ್ಣ, ಬಸವಣ್ಣ, ನಾಗಾಯಿ, ಮಡಿವಾಳ ಮಾಚಿದೇವರು, ಮರುಳ ಶಂಕರ ದೇವ, ನುಲಿಯ ಚಂದಯ್ಯ, ಮಹಾದೇವಿಯಕ್ಕ, ಗೋರಕ್ಷ – ಮುಂತಾದ ಶರಣರ ಆಧ್ಯಾತ್ಮಿಕ ಜೀವನ ಚಿತ್ರಗಳು ಈ ಕೃತಿಯಲ್ಲಿ ಸ್ಫುಟಗೊಂಡಿವೆ. ಕಾಯಕ ದಾಸೋಹ ತತ್ವಗಳು ಅನುಭಾವದ ಬೆಳಕಿನಲ್ಲಿ ಅರಳಿವೆ. ಪೂಜೆ, ಸ್ತುತಿ, ದೀಕ್ಷೆ, ಆರೋಗಣೆಗಳಿಗೆ ಅರ್ಥವಿವರಣೆ

ಲಭ್ಯವಾಗಿದೆ. ಗುರು-ಲಿಂಗ-ಜಂಗಮದ ಪರಿಕಲ್ಪನೆ ಸ್ಪಷ್ಟಗೊಂಡಿದೆ. ಪ್ರಶಂಸೆ, ಬೋಧೆಗಳಿಗೆ ವಿಶ್ಲೇಷಣೆ ದೊರಕಿದೆ.

ಪ್ರಕ್ಷುಬ್ಧಗೊಂಡ ಮನಸ್ಸನ್ನು ಪ್ರಶಾಂತಗೊಳಿಸುವ ಶಕ್ತಿಯಿದೆ ಶೂನ್ಯಸಂಪಾದನೆಗೆ. ಸಾಹಿತ್ಯಕ್ಕೆ ಸಾಹಿತ್ಯ ಆಧ್ಯಾತ್ಮಕ್ಕೆ ಆಧ್ಯಾತ್ಮವಾಗಿದೆ ಈ ಕೃತಿ. ಭುವನದ ಭಾಗ್ಯವಾದ ಈ ಪವಿತ್ರ ಗ್ರಂಥವನ್ನು ಕುರಿತು ನೂರು ಪ್ರವಚನಗಳನ್ನೇಕೆ ಶ್ರೀಮಠದಲ್ಲಿ ಏರ್ಪಡಿಸಬಾರದು ಎಂದು ಒಂದು ದಿನ ಹಳೇಮಠದ ಮೆಟ್ಟಿಲುಗಳನ್ನು ಇಳಿದು ಬರುತ್ತಿದ್ದ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು (ಡಾ ॥ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು – ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರು) ತಮ್ಮ ಅಭಿಲಾಷೆಯನ್ನು ಪ್ರಾಸಂಗಿಕವಾಗಿ ವ್ಯಕ್ತಪಡಿಸಿದರು. ಆ ಎಳೆಯನ್ನೇ ಗಟ್ಟಿಯಾಗಿ ಹಿಡಿದು ದಿನಾಂಕ : ೨-೮-೧೯೯೩ರಂದು ಶ್ರೀಮಠದಲ್ಲಿ ಪ್ರತಿಹುಣ್ಣಿಮೆಯಂದು ಶಿವಾನುಭವ ಗೋಷ್ಠಿ ನಡೆಯುವಂತೆ ಪ್ರಾರಂಭಿಸಲಾಯಿತು. ಪ್ರವಚನ ನೀಡಲು ಹಿರಿಯ ವಿದ್ವಾಂಸರೂ ಕನ್ನಡ ಪ್ರಾಧ್ಯಾಪಕರೂ ಆದ ಪ್ರೊ ॥ ಜಿ.ಎಸ್. ಸಿದ್ಧಲಿಂಗಯ್ಯನವರು ಒಪ್ಪಿದರು. ಒಂದು ವರ್ಷ ಪೂರ್ತಿ ಮತ್ತು ಮೇಲೊಂದು ತಿಂಗಳು ಒಟ್ಟು ಹದಿಮೂರು ಪ್ರವಚನಗಳನ್ನು ನಡೆಸಿಕೊಟ್ಟರು. ಶ್ರೀಯುತರ ಪ್ರವಚನ ಪ್ರಬುದ್ಧ, ಪರಿಪಾಕಗೊಂಡ ರಸತಾನ. ಶ್ರೋತೃಗಳಿಗೆಲ್ಲ ಹಿಗ್ಗು. ಅರುವತ್ತು ನಿಮಿಷಗಳು ಕಳೆದುಹೋದುದರ ಪರಿವೆಯೇ ಇಲ್ಲದಂತಹ ಸನ್ನಿವೇಶ. ಪರಮಪೂಜ್ಯ ಶ್ರೀಗಳವರ ಸಾನ್ನಿಧ್ಯ ಪ್ರವಚನ ಸಭೆಗೆ ಮಹತ್ವವನ್ನು ತಂದುಕೊಡುತ್ತಿತ್ತು. ದಿನಾಂಕ : ೨೧-೮-೯೪ರಿಂದ ರಾಣಿಬೆನ್ನೂರಿನ ಪ್ರೊ ॥ ವಿ.ವಿ. ಸಂಗಮದ ಅವರಿಂದ ಪ್ರವಚ ಮುಂದುವರಿಯಿತು. ಶ್ರೀಯುತರು ಇಪ್ಪತ್ನಾಲ್ಕು ತಿಂಗಳು ಪ್ರತಿಹುಣ್ಣಿಮೆಯಂದು ಅಷ್ಟು ದೂರದಿಂದ ಬಂದು ಶೂನ್ಯ ಸಂಪಾದನೆಯನ್ನು ಕುರಿತು ಅನುಭಾವದ ಪ್ರಸಾದವನ್ನು ಎಡೆಮಾಡುತ್ತ ಬಂದರು. ಅನುಭಾವ ದೃಷ್ಟಿಯಿಂದ ಕೃತಿಯನ್ನು ನೋಡುವ ವಿಧವನ್ನು ತಮ್ಮ ಅಸ್ಖಲಿತ ಮಾತುಗಳಿಂದ ತೋರಿಸಿಕೊಟ್ಟರು. ದಿನಾಂಕ : ೨೩-೧-೯೭ ರಿಂದ ಬೆಂಗಳೂರಿನ ಕನ್ನಡ ಪ್ರಾಧ್ಯಾಪಕರಾದ ಪ್ರೊ ॥ ಆರ್. ರಾಚಪ್ಪನವರು ಪ್ರತಿ ಹುಣ್ಣಿಮೆಯಂದು ಪ್ರವಚನ ಮಾಡುತ್ತ ಬಂದರು. ಅನುಭವೀ ಪ್ರಾಧ್ಯಾಪಕ ದೃಷ್ಟಿ, ಸಂಪಾದನೆಗಳ ಪರಿಚಯ ವಿಧಾನ, ವಿದ್ವದ್‌ಪೂರ್ಣ ವಿಶ್ಲೇಷಣೆ, ಶರಣರ ಜೀವನ ಶೈಲಿಗಳನ್ನು ಸರಳ ಸುಂದರವಾಗಿ ಪರಿಚಯಮಾಡಿಕೊಡುವ ಪ್ರವಚನ ಪದ್ಧತಿ ಶ್ರೀಯುತರದಾಗಿತ್ತು. ಒಟ್ಟು ಇಪ್ಪತ್ತೈದು ತಿಂಗಳು ಪ್ರೊ. ರಾಚಪ್ಪನವರು ಸಹಕರಿಸಿದ್ದರು. ದಿನಾಂಕ : ೨-೩-೯೯ರಿಂದ ತುಮಕೂರಿನವರಾದ ಆರೋಗ್ಯ ಇಲಾಖೆಯಲ್ಲಿ ಸೇವೆಮಾಡಿ ನಿವೃತ್ತರಾದ, ಬಳ್ಳಾರಿಯ ಪ್ರಸಿದ್ಧ ಶರಣ ಸಾಹಿತ್ಯ ವಿದ್ವಾಂಸರಾದ ಶ್ರೀ ವೈ. ನಾಗೇಶ ಶಾಸ್ತ್ರಿಗಳವರ ಶಿಷ್ಯರಾದ ಶ್ರೀ ಎಂ. ಚಂದ್ರಪ್ಪನವರು ೨-೧೦-೨೦೦೧ರವರೆಗೆ ಮೂವತ್ಮೂರು ಪ್ರವಚನಗಳನ್ನು ನೀಡಿದರು. ಪ್ರಶಾಂತವಾಗಿ, ಸದ್ದಿಲ್ಲದೆ ಹರಿಯುವ ನದಿಯಂತೆ ಪ್ರವಚನ ಸಾಗುತ್ತಿತ್ತು. ವಿಪುಲವಾದ ಅಧ್ಯಯನ ಶ್ರೀಯುತರದು. ವಚನಗಳನ್ನು ಸೋದಾಹರಿಸುತ್ತ ಸಾಗುತ್ತಿದ್ದರು. ಅನುಭಾವ ಪ್ರಧಾನವಾದ ಮಾತುಗಳು ಸರಳತೆಯ ಹಾದಿ ಅವರದು. ಶೂನ್ಯಸಂಪಾದನೆ ಶ್ರೀಯುತರನ್ನು ಶ್ರೀಮಠಕ್ಕೆ ಆತ್ಮೀಯರನ್ನಾಗಿಸಿತು. ಡಾ ॥ ಪಿ.ವಿ. ನಾರಾಯಣ ಹಾಗೂ ಡಾ ॥ ಎಂ. ಚಿದಾನಂದಮೂರ್ತಿ ಒಂದೊಂದು ಪ್ರವಚನ ನೀಡಿದರು. ಡಾ ॥ ಗುರುಲಿಂಗಕಾಪಸೆ ಒಂದು. ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು – ಶ್ರೀಮಠದಲ್ಲಿ ನೀಡಿದ ಪ್ರವಚನಗಳಿಂದ ಸ್ಫೂರ್ತಿತರಾಗಿ ಬರಹರೂಪಕ್ಕೆ ತರುವಲ್ಲಿ, ಶೂನ್ಯಸಂಪಾದನೆಯನ್ನು ಕುರಿತಾದ ಗ್ರಂಥಗಳನ್ನು ಪ್ರಕಟಿಸುವಲ್ಲಿ ಆಸಕ್ತರಾದರು; 'ಜಂಗಮಶೂನ್ಯ ಸಂಪಾದನಕಾರರು' ಎಂಬ ಪ್ರಶಂಸೆಗಳಿಸಿದರು. ಉಳಿದೆಲ್ಲ ಪ್ರವಚನ ಬಂಧುಗಳು ವಿಶೇಷಾಧ್ಯಯನಶೀಲರಾದರು.

ಶೂನ್ಯಸಂಪಾದನ ಪ್ರವಚನಸೇವಗೆ ಸಹಕರಿಸಿದ ಶ್ರೀಮಠದ ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು, ಡಾ ॥ ದೇವರಾಜು, ಶ್ರೀ ಆರ್. ಶಿವಲಿಂಗಯ್ಯ, ಶ್ರೀ ಎಂ. ಚೆನ್ನಪ್ಪ, ಶ್ರೀ ಜಿ.ಎಸ್. ಸೋಮಶೇಖರ್, ಶ್ರೀ ಕೆ.ಎಸ್. ಸಿದ್ಧಗಂಗಯ್ಯ, ದೊಡ್ಡಸಾರಂಗಿ ಶ್ರೀ ಮೃತ್ಯುಂಜಯಪ್ಪ, ಬುಗುಡನಹಳ್ಳಿ ಶ್ರೀ ಸೋಮಣ್ಣ, ಶ್ರೀ ಕೆ.ಎಸ್. ಮಂಜುನಾಥ್ (ಕೋರಿ) ಶೂಲಯ್ಯನಪಾಳ್ಯದ ಶ್ರೀ ನಂಜಪ್ಪ, ಶ್ರೀ ಎನ್. ವೀರಭದ್ರಪ್ಪ, ಶ್ರೀ ರಾಜಪ್ಪ, ಶ್ರೀ ಬಿ. ಮರುಳಸಿದ್ದಪ್ಪ, ಶ್ರೀ ಶರಣಾನಂದ, ಶ್ರೀ ಜಿ. ಮಧೂದಯ್ಯ, ಶ್ರೀಮತಿ ಸಿದ್ಧಗಂಗಮ್ಮ, ಜಾಲಮಂಗಲದ ಶ್ರೀ ನಂಜುಂಡಯ್ಯ, ಶ್ರೀ ಕೆ. ಸಿದ್ಧನಂಜಪ್ಪ, ಶ್ರೀ ಟಿ.ಎಲ್. ಸಿದ್ಧರಾಮಯ್ಯ, ಶ್ರೀ ಟಿ.ಆರ್. ಚಂದ್ರಶೇಖರಯ್ಯ, ಶ್ರೀ ಕಾಳಶೆಟ್ಟಿ, ಸೂಲಯ್ಯನ ಪಾಳ್ಯದ ಶ್ರೀ ಕೆಂಪಣ್ಣ, ಶ್ರೀಮತಿ ಸುಶೀಲ, ಶ್ರೀಮತಿ ರೇಣುಕಾ ಪರಮೇಶ್, ಶ್ರೀ ಸಿ.ಬಿ. ಶಂಕರಪ್ಪ, ಶ್ರೀ ಕೆ. ಬಸವಯ್ಯ, ಶ್ರೀ ಹೆಚ್.ವಿ. ವೀರಭದ್ರಯ್ಯ ಅವರುಗಳು.

ದಿನಾಂಕ : ೨-೮-೯೩ ರಿಂದ ೨-೧೦-೨೦೦೧ರವರೆಗೆ ಒಂದುನೂರು ಹುಣ್ಣಿಮೆಗಳಲ್ಲಿ ನಡೆದ ಶೂನ್ಯಸಂಪಾದನೆ ಪ್ರವಚನಗಳು ತುಮಕೂರು ನಗರದಲ್ಲಿ ಮನೆಮನೆಗಳಲ್ಲಿ ಶರಣಗೋಷ್ಠಿ, ವೀರಶೈವ ಧರ್ಮಗೋಷ್ಠಿಗಳು ಪ್ರತಿನಿತ್ಯ ನಡೆಯಲು ಸ್ಫೂರ್ತಿಯಾಯಿತು.

*







ಭಾಗ – ೫

# ಬಂಧನ

– ಡಾ. ಡಿ.ವಿ. ಗುರುಪ್ರಸಾದ್, ಐ.ಪಿ.ಎಸ್.,
ನಿರ್ದೇಶಕರು
ವಾರ್ತಾ ಮತ್ತು ಪ್ರಚಾರ ಇಲಾಖೆ
ನಂ. ೫, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು – ೧

ಪೊಲೀಸರು ಯಾರನ್ನಾದರೂ ಬಂಧಿಸುವಾಗ ಆ ವ್ಯಕ್ತಿ ಬಂಧನಕ್ಕೆ ಒಳಗಾಗದೇ ತಪ್ಪಿಸಿಕೊಂಡು ಹೋಗುವ ಆಸಾಮಿ ಎನ್ನಿಸಿದರೆ ಅಂತಹವನ ಮೇಲೆ ಬಲ ಉಪಯೋಗಿಸಿ ಬಂಧಿಸಬಹುದು ಎಂದು ಕಾನೂನು ಹೇಳುತ್ತದೆ. ಎಷ್ಟು ಬಲ ಉಪಯೋಗಿಸಬೇಕು ಎನ್ನುವುದರ ಬಗ್ಗೆಯೂ ಸಿಆರ್‌ಪಿಸಿ ಸ್ಪಷ್ಟವಾಗಿದೆ. ಒಂದು ವೇಳೆ ನಾವು ಯಾವ ಆರೋಪಿಯನ್ನು ಬಂಧಿಸಲು ಯತ್ನಿಸುತ್ತಿದ್ದೇವೋ ಆತ ಮರಣದಂಡನೆಗೆ ಗುರಿಯಾಗುವ ಅಥವಾ ಜೀವಾವಧಿ ಶಿಕ್ಷೆ ಮಾಡಿರುವ ಆರೋಪ ಹೊತ್ತಿದ್ದರೆ ಅಂತಹವನ ಮೇಲೆ ಪೊಲೀಸರು ಮಾರಣಾಂತಿಕ ಬಲ ಉಪಯೋಗಿಸಿಸಬಹುದು. ಉದಾಹರಣೆಗೆ ಒಬ್ಬ ವ್ಯಕ್ತಿ ಕೊಲೆ ಮಾಡಿದ್ದಾನೆ ಎಂದುಕೊಳ್ಳೋಣ – ಆ ವ್ಯಕ್ತಿ ಬಂಧನದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿ ಓಡಿಹೋಗುತ್ತಾನೆ – ಆಗ ಆವನ ಮೇಲೆ ಪೊಲೀಸರು ಗುಂಡು ಹಾರಿಸಬಹುದು. ಇದು ಮಾರಣಾಂತಿಕ ಬಲ ಪ್ರಯೋಗ. ಆದರೆ ಪಿಕ್‌ಪಾಕೆಟ್ ಮಾಡಿ ಓಡಿ ಹೋಗುತ್ತಿರುವ ವ್ಯಕಿಯೊಬ್ಬನ ಮೇಲೆ ಪೊಲೀಸರು ಮಾರಣಾಂತಿಕವಾಗಿ ಹಲ್ಲೆ ಮಾಡತಕ್ಕದ್ದಲ್ಲ.

ಬಂಧಿತನಾದ ವ್ಯಕ್ತಿಗೆ ಸುಮ್ಮಸುಮ್ಮನೆ ಕೈಕೋಳ ಹಾಗೂ ಕಾಲುಕೋಳ ತೊಡಿಸುವುದಕ್ಕೂ ಸಾಕಷ್ಟು ನಿಬಂಧನೆಗಳನ್ನು ನ್ಯಾಯಾಲಯ ಹೇರಿದೆ. ಒಬ್ಬ ವ್ಯಕ್ತಿ ಬಂಧಿತನಾಗಿ ಆತ ಅಪಾಯಕಾರೀ ವ್ಯಕ್ತಿಯಾಗಿದ್ದು ಬಂಧನದಿಂದ ಬಿಡಿಸಿಕೊಂಡು ಹೋಗಿಬಿಡುತ್ತಾನೆ ಎಂದು ಸಂಶಯವಿದ್ದರೆ ಅವನು ಓಡಿಹೋಗದಂತೆ ತಡೆಯಲು ಪೊಲೀಸರು ಕ್ರಮಗಳನ್ನು ತೆಗೆದುಕೊಳ್ಳಬಹುದಾಗಿದೆ.

ಹೆಣ್ಣುಮಕ್ಕಳನ್ನು ಬಂಧಿಸುವಾಗಲೂ ಪೊಲೀಸರಿಗೆ ಸಾಕಷ್ಟು ನಿಬಂಧನೆಗಳಿವೆ. ಹೆಣ್ಣು ಮಕ್ಕಳನ್ನು ಸಾಮಾನ್ಯವಾಗಿ ಮಹಿಳಾ ಪೊಲೀಸರೇ ಬಂಧಿಸಬೇಕು. ರಾತ್ರಿಯ ವೇಳೆ ಅವರನ್ನು ಪೊಲೀಸ್ ಠಾಣೆಯಲ್ಲಿ ಕೂಡಿಡಬಾರದು. ಒಂದು ವೇಳೆ ಮಹಿಳಾ ಕೈದಿಯನ್ನು ಪೊಲೀಸ್ ಠಾಣೆಯಲ್ಲಿ ಇಡಲೇಬೇಕಾದ ಅನಿವಾರ್ಯ ಪ್ರಸಂಗ ಬಂದರೆ ಆಕೆಯನ್ನು ಕಾಯಲು ಮಹಿಳಾ ಪೊಲೀಸರನ್ನೇ ನೇಮಿಸಬೇಕಾಗುತ್ತದೆ.

ಒಬ್ಬ ವ್ಯಕ್ತಿಯನ್ನು ಬಂಧಿಸುವಾಗ ಪೊಲೀಸರು ಅವನಿಗೆ ಯಾವ ಕಾರಣಕ್ಕೆ ಬಂಧಿಸಲಾಗುತ್ತಿದೆ ಎಂದು ತಿಳಿಸಲೇಬೇಕು. ಸಂವಿಧಾನದಲ್ಲಿ ಕೊಟ್ಟ ಚಲನ ಸ್ವಾತಂತ್ರ್ಯಕ್ಕೆ ಪೊಲೀಸರು ವಿನಾಕಾರಣ ಮೊಣಕು ಹಾಕುವಂತಿಲ್ಲ. ಇದೇ ಅಲ್ಲದೆ ಬಂಧಿಸಿದ ೨೪ ಗಂಟೆಗಳ ಒಳಗಾಗಿ ಬಂಧಿತನನ್ನು ನ್ಯಾಯಾಲಯದ ಮುಂದೆ ಹಾಜರುಪಡಿಸಲೇ ಬೇಕಾದ ಅನಿವಾರ್ಯತೆ ಇದೆ.

ಬಂಧಿತನನ್ನು ಬಂಧಿಸಿದ ಕೂಡಲೇ ಪೊಲೀಸರು ಸಂಬಂಧಪಟ್ಟ ಜಿಲ್ಲಾ ಮ್ಯಾಜಿಸ್ಟ್ರೇಟರಿಗೆ "ಅರೆಸ್ಟ್ ಕಾರ್ಡ್" ಎನ್ನುವ ವರದಿಯಲ್ಲಿ ಬಂಧಿತನ ಹೆಸರು/ವಿಳಾಸ, ಏತಕ್ಕೆ ಬಂಧಿಸಲಾಗಿದೆ? ಎಂದು? ಯಾವಾಗ ಬಂಧಿಸಲಾಗಿದೆ? ಎಂದು ತಿಳಿಸಬೇಕು. ಒಂದು ವೇಳೆ ಬಂಧನದ ೨೪ ಗಂಟೆಗಳ ಒಳಗಡೆ ಬಂಧಿಯನ್ನು ಬಿಡುಗಡೆ ಮಾಡಲಾಗದಿದ್ದರೆ ಬಂಧನದ ಮುಂದುವರಿಕೆಗೆ ನ್ಯಾಯಾಲಯದ ಅಪ್ಪಣೆಯನ್ನು ಪಡೆಯ ಬೇಕು. ಇದಕ್ಕೆ ಪೊಲೀಸ್ ಕಸ್ಟಡಿ ರಿಮಾಂಡ್ ಎನ್ನುತ್ತಾರೆ.

ಬಂಧನದ ನಂತರ ಏನಾಗುತ್ತದೆಂದು ತಿಳಿದುಕೊಳ್ಳಲು ತುಂಬಾ ಜನರಿಗೆ ಕುತೂಹಲ. ಸಾಧಾರಣವಾಗಿ ಬಂಧನದ ನಂತರ ಆಗುವುದು ಬಿಡುಗಡೆ ಅಲ್ಲವೇ? ಆದರೆ ಬಂಧಿಸಿದ ಕೂಡಲೇ ಬಿಟ್ಟುಬಿಡುವುದು ಹೇಗೆ?

ಈಗಾಗಲೇ ಹೇಳಿದಂತೆ ಬಂಧನಕ್ಕೆ ಕಾರಣಗಳು ಮೂರು ತರಹದ್ದು – ಒಂದು ನಾನ್ ಕಾಗ್ನಿಜಿಬಲ್ ಅಪರಾಧ; ಎರಡು ಕಾಗ್ನಿಜಿಬಲ್ ಅಪರಾಧ ಹಾಗೂ ಮೂರು ಮ್ಯಾಜಿಸ್ಟ್ರೇಟರು/ಇತರರಿಂದ ವಾರಂಟ್ ಬಂದಂತಹ ಸಂದರ್ಭ.

ಒಂದು ವೇಳೆ ನಾನ್ – ಕಾಗ್ನಿಜಿಬಲ್ ಅಪರಾಧದ ಆರೋಪದ ಮೇಲೆ ಬಂಧಿಸಿದರೆ ಬಂಧಿತನ ಸರಿಯಾದ ಹೆಸರು/ವಿಳಾಸ ಪಡೆದುಕೊಂಡ ನಂತರ ಅವನನ್ನು ಬಿಟ್ಟುಬಿಡಬೇಕು. ಒಂದು ವೇಳೆ ಕಾಗ್ನಿಜಿಬಲ್ ಅಪರಾಧದ ಆರೋಪದ ಮೇಲೆ ಬಂಧಿಸಿದರೆ ಪೊಲೀಸರು ಆ ಅಪರಾಧ ಜಾಮೀನಿನ ಮೇಲೆ ಬಿಡುವಂತಹ ಅಪರಾಧವೇ ಅಥವಾ ಅಲ್ಲವೇ ಎಂದು ಮೊದಲು ನೋಡಬೇಕು.

ದಂಡ ಪ್ರಕ್ರಿಯಾ ಸಂಹಿತೆ (ಸಿಆರ್‌ಪಿಸಿ)ಯ ಅನುಚ್ಛೇದದಲ್ಲಿ ಪ್ರತಿ ಐಪಿಸಿ ಅಪರಾಧದ ಮುಂದೆಯೂ ಆ ಅಪರಾಧ ಜಾಮೀನಿನ ಮೇಲೆ ಬಿಡುವಂತಹದ್ದೇ ಅಲ್ಲವೇ ಎಂದು ನಮೂದಿಸಿದೆ, ಇದನ್ನು ನೋಡಿ ಜಾಮೀನಿನ ಮೇಲೆ ಬಿಡುವಂತಹ ಅಪರಾಧವಾದರೆ, ಆರೋಪಿಯನ್ನು ಜಾಮೀನು ಬರೆಸಿಕೊಂಡು ಬಿಟ್ಟುಬಿಡಬಹುದು.

ಒಂದು ವೇಳೆ ಅಪರಾಧ ಜಾಮೀನಿನ ಮೇಲೆ ಬಿಡಲಾರದಂತದ್ದಾಗಿದ್ದರೆ ಆ ವ್ಯಕ್ತಿಯನ್ನು ಬಂಧಿಸಿದ ೨೪ ಗಂಟೆಗಳ ಒಳಗೆ ಸಂಬಂಧಿಸಿದ ಮ್ಯಾಜಿಸ್ಟ್ರೇಟರ ಮುಂದೆ ಹಾಜರುಪಡಿಸಬೇಕು. ನ್ಯಾಯಾಧೀಶರು ಆತನನ್ನು ಜಾಮೀನು ಬರೆಸಿಕೊಂಡು ಬಿಟ್ಟುಬಿಡಬಹುದು. ಇಲ್ಲವೇ ಜೈಲಿಗೆ ಕಳಿಸಬಹುದು.



ಅಪರಾಧ ಸಾಬೀತೇ ಆಗಿಲ್ಲ, ಜೈಲಿಗೆ ಹೇಗೆ ಕಳಿಸ್ತಾರೆ ಎನ್ನುವ ಪ್ರಶ್ನೆ ನಮ್ಮ ಮನದಲ್ಲಿ ಮೂಡುವುದು ಸಹಜ. ಸಾಧಾರಣವಾಗಿ ಬಂಧಿತನಾದಂತಹ ವ್ಯಕ್ತಿಯು ಬಹಳ ಗುರುತರ ಅಪರಾಧವಾದ ಕೊಲೆ, ದರೋಡೆ, ಜಬರಿ ಕಳವು, ದೇಶದ್ರೋಹ ಮಾಡಿದ್ದರೆ ಅಥವಾ ಆತ ಉಗ್ರವಾದಿಯಾಗಿದ್ದರೆ ಆತನನ್ನು ಜಾಮೀನಿನ ಮೇಲೆ ಬಿಡದೇ ಜೈಲಿಗೆ ಕಳುಹಿಸುತ್ತಾರೆ.

ಕೆಲವಾರು ಸಲ ಪೊಲೀಸರೇ ತನಿಖೆ ಪೂರ್ಣಗೊಳಿಸಲು ಈ ಅಪರಾಧಿ ನಮ್ಮ ವಶದಲ್ಲಿ ಇರಬೇಕಾಗಿದೆ, ಆದ್ದರಿಂದ ಇವನನ್ನು ಬಿಡಬೇಡಿ, ಇವನನ್ನು ನಮ್ಮ ಸುಪರ್ದಿಗೆ ಕೊಡಿ ಎಂದು ನ್ಯಾಯಾಲಯವನ್ನು ಕೋರಿ ಅಪರಾಧಿಯನ್ನು ತಮ್ಮ ವಶಕ್ಕೆ ಪಡೆಯುತ್ತಾರೆ.

ಇದಕ್ಕೆ ಪೊಲೀಸ್ ಕಸ್ಟಡಿ ರಿಮಾಂಡ್ ಎನ್ನುತ್ತಾರೆ. ಉದಾಹರಣೆಗೆ ಐದು ಜನ ಸೇರಿ ದರೋಡೆ ಮಾಡಿರುತ್ತಾರೆ. ಅವರಲ್ಲಿ ಒಬ್ಬನೇ ಅಪರಾಧಿ ಪೊಲೀಸರ ಕೈಗೆ ಸಿಕ್ಕಿರುತ್ತಾನೆ. ೨೪ ಗಂಟೆಗಳ ಅವಧಿಯಲ್ಲಿ ಆ ಅಪರಾಧಿಯ ಬಳಿಯಿಂದ ಕಳುವಾದ ಮಾಲಾಗಲೀ ಅಥವಾ ಇನ್ನಿತರ ಆರೋಪಿಗಳ ಬಗ್ಗೆ ಮಾಹಿತಿಯಾಗಲೀ ದೊರೆಯುವುದಿಲ್ಲ.

ತನಿಖೆಯ ಮುಂದುವರಿಕೆಗಾಗಿ ಆ ವ್ಯಕ್ತಿ ಪೊಲೀಸರ ವಶದಲ್ಲಿ ಇರುವುದು ಅನಿವಾರ್ಯವಾಗುತ್ತದೆ. ಆಗ ಒಂದು ವಾರ, ಹತ್ತು ದಿನಗಳ ಕಾಲ ಪೊಲೀಸರು ಆ ವ್ಯಕ್ತಿಯ ರಿಮಾಂಡ್ ಪಡೆದು ತಮ್ಮ ವಶದಲ್ಲಿ ಅವನನ್ನು ಇಟ್ಟುಕೊಳ್ಳುತ್ತಾರೆ.

ರಿಮಾಂಡ್ ಅವಧಿ ಮುಗಿದ ನಂತರ ಆತನನ್ನು ಮತ್ತೆ ನ್ಯಾಯಾಧೀಶರ ಮುಂದೆ ಹಾಜರು ಮಾಡಿ, ಹೆಚ್ಚಿನ ರಿಮಾಂಡ್ ಪಡೆಯಬಹುದು. ಇಲ್ಲವೇ ಆತನನ್ನು ಜ್ಯುಡಿಷಿಯಲ್ ಕಸ್ಟಡಿಗೆ ಕಳಿಸಬಹುದು.

ಜ್ಯುಡಿಷಿಯಲ್ ಕಸ್ಟಡಿ ಎಂದರೆ ನ್ಯಾಯಾಲಯದ ಸುಪರ್ದಿಯಲ್ಲಿ ಬಂಧನ ಎಂದು. ಒಬ್ಬ ಅಪರಾಧಿ ಗುರುತರ ಅಪರಾಧ ಎಸಗಿರುತ್ತಾನೆ. ಆತನ ಅವಶ್ಯಕತೆ ತನಿಖಾಧಿಕಾರಿಗೆ ಇರುವುದಿಲ್ಲ. ಆದರೂ ಆತನನ್ನು ಬಂಧನದಿಂದ ಬಿಡುಗಡೆ ಮಾಡುವುದು ಸೂಕ್ತವಲ್ಲ ಎಂದು ಪೊಲೀಸರಿಗೆ ಅನ್ನಿಸುತ್ತದೆ.

ಆಗ ಪೊಲೀಸರು ರಿಮಾಂಡ್ ಅರ್ಜಿ ಬರೆದು ಈ ಅಪರಾಧಿಯನ್ನು ತನಿಖೆ ಮುಗಿಯುವವರೆಗೂ ನ್ಯಾಯಾಂಗ ಬಂಧನದಲ್ಲೇ ಇಟ್ಟುಕೊಳ್ಳಬೇಕೆಂದು ವಿನಂತಿಸುತ್ತಾರೆ.

ಅರ್ಜಿಯ ಪರಿಶೀಲನೆಗೆ ಮಾಡಿದ ನ್ಯಾಯಾಲಯ ಆತನನ್ನು ನ್ಯಾಯಾಂಗ ಬಂಧನಕ್ಕೆ ಕಳಿಸಬಹುದು. ಪೊಲೀಸ್ ಸ್ಟೇಷನ್ನಿನಲ್ಲಿ ಲಾಕಪ್‌ನಲ್ಲಿದ್ದರೆ ಅದು ಪೊಲೀಸ್ ವಶದ ಬಂಧನ. ನ್ಯಾಯಾಲಯದ ವಶದ ಬಂಧನ ಎಂದರೆ ಆ ವ್ಯಕ್ತಿ ಜೈಲಿನಲ್ಲಿ ಇರಬೇಕಾಗುತ್ತದೆ.

ಆದ್ದರಿಂದ ಜೈಲಿಗೆ ಹೋದವರೆಲ್ಲರೂ ಅಪರಾಧ ಸಾಬೀತಾಗಿ ಶಿಕ್ಷೆಗೆ ಒಳಪಟ್ಟವರು ಅಂತ ಅಲ್ಲ, ಶಿಕ್ಷೆ ಅನುಭವಿಸುತ್ತಾ ಇರುವವರಲ್ಲದೆ, ಅಂಡರ್ ಟ್ರೈಯಲ್ಸ್, ಅಂದರೆ ನ್ಯಾಯಾಲಯದ ಪ್ರಕರಣ ಎದುರಿಸುತ್ತಿರುವ ಆರೋಪಿಗಳು ಹಾಗೂ ನ್ಯಾಯಾಂಗ ಬಂಧನದಲ್ಲಿರುವವರೂ ಜೈಲಿನಲ್ಲಿ ಇರುತ್ತಾರೆ.

ಬಂಧನ ಮಾಡಿದ ಕೂಡಲೇ ಪೊಲೀಸರು ಮಾಡಬೇಕಾದ ಕೆಲಸಗಳು ಹಲವಾರು. ಮೊಟ್ಟ ಮೊದಲಿಗೆ ಬಂದಿತ ವ್ಯಕ್ತಿಯ ಅಂಗ ಶೋಧನೆ ಮಾಡಬೇಕು. ಇದಕ್ಕೆ ಕಾರಣ ಹಲವಾರು. ಬಂಧಿತನಾದ ವ್ಯಕ್ತಿ ತನ್ನ ಬಳಿಯಲ್ಲಿ ಆಯುಧಗಳನ್ನು ಅಡಗಿಸಿಕೊಂಡು ಪೊಲೀಸರ ಮೇಲೆ ಹಲ್ಲೆ ಮಾಡಿ ತಪ್ಪಿಸಿಕೊಂಡು ಹೋಗಬಹುದು. ಇಲ್ಲವೇ ತನ್ನ ಬಳಿ ಇರುವ ಆಯುಧಗಳಿಂದ ತಾನೇ ಹಲ್ಲೆಮಾಡಿಕೊಂಡು ಆತ್ಮಹತ್ಯೆ ಮಾಡಿಕೊಳ್ಳಬಹುದು.

ಹಲವಾರು ಅಪರಾಧಿಗಳು ಪೊಲೀಸ್ ಬಂದನದ ಕೂಡಲೇ ಸೈನೈಡ್ ತಿಂದಾಗಲೀ, ಅಥವಾ ಹಗ್ಗ/ಟವೆಲ್/ಲುಂಗಿ/ಬಟ್ಟೆಯಿಂದ ನೇಣುಹಾಕಿಕೊಂಡು ಸತ್ತಿರುವ ನಿದರ್ಶನಗಳು ಹಲವಾರು ಇವೆ.

ಆದ್ದರಿಂದ ಬಂಧನವಾದ ಕೂಡಲೇ ಪೊಲೀಸರು ಬಂಧಿತನನ್ನು ಶೋಧನೆ ಮಾಡಿ ಅವನ ಬಳಿಯಲ್ಲಿರುವ ವಸ್ತುಗಳು, ಅಂದರೆ ಉಂಗುರ, ವಾಚು, ಪರ್ಸು, ಚೈನು ಇತ್ಯಾದಿಗಳನ್ನು ತಮ್ಮ ವಶಕ್ಕೆ ಪಡೆದುಕೊಂಡು ಈ ವಸ್ತುಗಳ ಪಟ್ಟಿಯನ್ನು ಮಾಡಬೇಕು. ಇದಕ್ಕೆ ರಸೀತಿಯನ್ನು ಬಂಧಿತನಿಗೆ ನೀಡತಕ್ಕದ್ದು.

ಮಹಿಳಾ ಬಂಧಿತರ ಶೋಧನೆಯನ್ನು ಮಹಿಳಾ ಪೊಲೀಸರೇ ಮಾಡತಕ್ಕದ್ದು. ಒಂದು ವೇಳೆ ಬಂಧಿತನ ಬಳಿ ಆಯುಧ ಇತ್ಯಾದಿ ದೊರೆತರೆ ಅವನ್ನು ಸೀಜ್ ಮಾಡಿ ಸಂಬಂಧಿತ ಮ್ಯಾಜಿಸ್ಟ್ರೇಟರ ಮುಂದೆ ಹಾಜರುಪಡಿಸಬೇಕು.

ಒಂದು ವೇಳೆ ಬಂಧಿತನು ರೇಪ್ ಮುಂತಾದ ಅಪರಾಧ ಮಾಡಿರುವ ಸಂಶಯವಿದ್ದು ಈ ಅಪರಾಧ ಸಾಬೀತು ಮಾಡಲು ಬಂಧಿತನ ವೈದ್ಯಕೀಯ ಪರೀಕ್ಷೆ ಆಗಬೇಕು ಎಂದು ಪೊಲೀಸರಿಗೆ ಅನ್ನಿಸಿದರೆ ಆ ಬಂಧಿತನ ವೈದ್ಯಕೀಯ ಪರೀಕ್ಷೆಯನ್ನು ರಿಜಿಸ್ಟರ್ಡ್ ವೈದ್ಯರಿಂದ ಮಾಡಿಸಬಹುದು. ಮಹಿಳಾ ಬಂಧಿತಳ ಪರೀಕ್ಷೆಯನ್ನು ಮಹಿಳಾ ವೈದ್ಯರೇ ಮಾಡಬೇಕು.

ಮೇಲೆ ತಿಳಿಸಿದ ಪ್ರಕ್ರಿಯೆ ಸಾಮಾನ್ಯವಾಗಿ ಆಗುವುದು ಬಂಧಿತ ಆರೋಪಿಯನ್ನು ಮ್ಯಾಜಿಸ್ಟ್ರೇಟರ ಮುಂದೆ ಹಾಜರು ಮಾಡಬೇಕಾದ ಸಂದರ್ಭದಲ್ಲಿ.

ಒಂದು ವೇಳೆ ಬಂಧಿತ ವ್ಯಕ್ತಿಯನ್ನು ಪೊಲೀಸರೇ ಜಾಮೀನು ಪಡೆದುಕೊಂಡು ಬಿಟ್ಟುಬಿಟ್ಟರೆ ಅವನ ಶೋಧನೆ ಇತ್ಯಾದಿಯನ್ನು ಮಾಡುವುದಿಲ್ಲ.

ಸಾಮಾನ್ಯವಾಗಿ ಪೊಲೀಸರೇ ಜಾಮೀನು ಪಡೆದು ಬಿಟ್ಟು ಬಿಡುವಂತಹ ಆರೋಪಗಳೆಂದರೆ ಆಕ್ಸಿಡೆಂಟ್ ಪ್ರಕರಣಗಳು, ಸಾರ್ವಜನಿಕ ಸ್ಥಳದಲ್ಲಿ ದಾಂಧಲೆ ಮಾಡಿದಂತಹ ಪ್ರಕರಣಗಳು, ಹೊಡೆದಾಟ ಮಾಡುವುದು, ನಂಬಿಕೆದ್ರೋಹ ಮಾಡುವುದು, ಮೋಸ ಮಾಡುವುದು, ಕಿಡಿಗೇಡಿತನ ಇತ್ಯಾದಿ ಇಂತಹ ಕೇಸುಗಳಲ್ಲಿ ಜಾಮೀನು ಪಡೆದ ವ್ಯಕ್ತಿ ಪೊಲೀಸರು ಹೇಳಿದ ದಿನ ಹಾಗೂ ವೇಳೆ ನ್ಯಾಯಾಲಯದ ಮುಂದೆ ಹಾಜರಾಗ ಬೇಕಾಗುತ್ತದೆ.

❋

(ಮುಂದುವರಿಯುತ್ತದೆ)







ನಿಮಗಿದು ತಿಳಿದಿರಲಿ

# ಕುಂಬಳ ಕಾಯಿ, ಬೂದಿಗುಂಬಳಕಾಯಿ



ಆಯುರ್ವೇದಾಚಾರ್ಯ, ಆಸ್ಥಾನ ವಿದ್ವಾನ್, ಆಯುರ್ವೇದರತ್ನ
ಪಂಡಿತ ಶ್ರೀ ಶಿವಕುಮಾರ ಸ್ವಾಮಿಗಳು

**ಕುಂ**ಬಳಕಾಯಿಯಲ್ಲಿ ಕೆಂಪು ಬಿಳುಪು ಎರಡು ಜಾತಿಗಳಿವೆ. ಕೆಂಪುಬಣ್ಣದ ಕಾಯಿಯನ್ನು ಹುಳಿ ಪಲ್ಯಗಳಿಗೆ ಉಪಯೋಗಿಸುತ್ತಾರೆ. ಬಿಳಿಯ ಬಣ್ಣದ ಕಾಯಿಯು ಬೂದಿಗುಂಬಳವೆಂದು ಪ್ರಸಿದ್ಧವಾಗಿಯೂ ಬಹಳ ಗುಣಕಾರಿಯಾಗಿಯೂ ಇದೆ. ಇದನ್ನು ಔಷಧಿ ರೂಪವಾಗಿ ಉಪಯೋಗಿಸುವುದೇ ಹೆಚ್ಚಾಗಿದೆ. ಇದನ್ನು ತರಕಾರಿಯ ರೂಪವಾಗಿ ಉಪಯೋಗಿಸುವುದು ಬಹಳ ಕಡಿಮೆ ಮತ್ತು ಇದರಿಂದ ಅನೇಕ ವಿಧ ಮಿಠಾಯಿಗಳನ್ನು ಮಾಡುತ್ತಾರೆ.

★ ಬಲಿತು ಹಣ್ಣಾಗಿರುವ ಕುಂಬಳವೇ ರುಚಿಕರ ಮತ್ತು ದೇಹಪುಷ್ಠಿ ಬಲ ವೀರ್ಯಗಳನ್ನು ಹೆಚ್ಚಿಸುವುದು, ಮಲಮೂತ್ರಗಳನ್ನು ಸಡಲಿಸುವುದು, ಪಿತ್ತವಿಕಾರ, ಮೂಲವ್ಯಾಧಿ, ದಾಹ, ಸಂತಾಪ, ಹೊಟ್ಟೆಯುಬ್ಬರ ರಕ್ತವಿಕಾರಗಳನ್ನು ಶಾಂತಮಾಡುತ್ತದೆ. ಎಳಸಾದ ಕಾಯಿಯು ಗುಣಕಾರಿಯಲ್ಲ. ಎಳೆಯ ಕಾಯಿಯನ್ನು ತಿನ್ನುವುದರಿಂದ ರಕ್ತವಿಕಾರ ಮತ್ತು ಪಿತ್ತವಿಕಾರವುಂಟಾಗುವುದಲ್ಲದೆ ಅಗ್ನಿಯು ಮಂದವಾಗುತ್ತದೆ. ದುರ್ಬಲರಾದವರಿಗೂ, ರೋಗಿಗಳಿಗೂ ಎಳೆಯ ಕುಂಬಳಕಾಯಿಯು ಬಹಳ ಕೆಡಕನ್ನುಂಟುಮಾಡುತ್ತದೆ. ಯಾವಾಗಲೂ ಇದನ್ನು ಬಲಿತು ಕೆಂಪೇರಿದ ಮೇಲೆಯೇ ತಿನ್ನುವುದುತ್ತಮ. ಈ ಕುಂಬಳವು ಅತ್ಯಂತ ರುಚಿಕರವೂ, ಗುಣಕರವೂ, ಆರೋಗ್ಯವರ್ಧಕವೂ ಆಗಿರುತ್ತದೆ. ಹಳ್ಳಿಗಳಲ್ಲಿ ಇದನ್ನು ಸುಮಾರು ಒಂದೊಂದು ವರ್ಷದವರೆಗೂ ಇಡುವ ಪದ್ಧತಿಯುಂಟು. ಇತರ ತರಕಾರಿಗಳಂತೆ ಇದು ಬೇಗ ಕೆಡುವುದಿಲ್ಲ. ಇದರ ಬೀಜಗಳು ಅತ್ಯಂತ ರುಚಿಕರವೂ ಪುಷ್ಟಿಕರವೂ ಆಗಿರುವುದಲ್ಲದೆ ಹೃದಯ ಮತ್ತು ಮೆದಳಿಗೆ ವಿಶೇಷ ಬಲವನ್ನು ಕೊಡತಕ್ಕುದಾಗಿವೆ. ಇದರ ಮರ್ಮವನ್ನರಿತಿದ್ದ ನಮ್ಮ ಹಿರಿಯರುಗಳು ಮನೆಗೆ ಕುಂಬಳಕಾಯಿಯನ್ನು ತಂದರೆ ಬೀಜಗಳನ್ನು ಬಿಸಾಡುತ್ತಿರಲಿಲ್ಲ. ಅವುಗಳನ್ನು ಒಣಗಿಸಿ ತಿನ್ನುತ್ತಿದ್ದರು ಮತ್ತು ಮಕ್ಕಳಿಗೆ ತಿನ್ನುಸುತ್ತಿದ್ದರು. ಈಗಿನ ಕಾಲದಲ್ಲಿ ಆ ಬೀಜಗಳನ್ನು ಕೇಳತಕ್ಕವರೇ ಇಲ್ಲ. ಹೃದಯದ ಮತ್ತು ಮೆದಳಿನ ದುರ್ಬಲತೆಯುಳ್ಳವರು ಕುಂಬಳದ ಬೀಜಗಳನ್ನು ಬಿಡದೆ ಕೆಲವು ದಿನಗಳವರೆಗೆ ಹಾಗೆಯೇ ಆಗಲಿ ಅಥವಾ ಹಾಲಿನೊಡನೆ ಅರೆದಾಗಲಿ ಸೇವಿಸುತ್ತಿದ್ದರೆ ವಿಶೇಷ ಪ್ರಯೋಜನವುಂಟಾಗುತ್ತದೆ. ಇದು ನಮ್ಮ ಮನೆಯ ಟಾಣಿಕ್ ಆಗಿದೆ. ಇಂತಹ ಸುಲಭಸಾಧ್ಯವಾದ ಪುಷ್ಟಿಕರ ವಸ್ತುವನ್ನು ಚೆಲ್ಲಿ ಬಹು ಬೆಲೆಯ ಅನೇಕ ಟಾಣಿಕ್ಕುಗಳಿಗೆ ಹಣವನ್ನು ಚೆಲ್ಲುವುದು ನಮ್ಮ ದೇಶದಲ್ಲಿ ಇತ್ತೀಚೆಗೆ ರೂಢಿಯಾಗಿ ಹೋಗಿದೆ. ಮೆದಳಿಗೆ ವಿಶೇಷ ಪರಿಶ್ರಮವನ್ನು ಕೊಡತಕ್ಕವರು ಕುಂಬಳದ ಬೀಜವನ್ನು ಅವಶ್ಯವಾಗಿ ಸೇವಿಸಬೇಕು.

★ ಕುಂಬಳದ ಬೀಜಗಳ ಚೂರ್ಣ ೪೮ ಗುಂಜಿಗಳ ತೂಕ ಮತ್ತು ಹಸನಾದ ಕೋಷ್ಟದ ಚೂರ್ಣ ೧೨ ಗುಂಜಿಗಳ ತೂಕ ಇವೆರಡನ್ನೂ ಅರ್ಧ ತೊಲ ಜೇನುತುಪ್ಪದೊಡನೆ ಕೂಡಿಸಿ ಸೇವಿಸುವುದರಿಂದ ಬುದ್ಧಿಭ್ರಮಣೆ (ಹುಚ್ಚು) ಅವಶ್ಯವಾಗಿ ಗುಣವಾಗುತ್ತದೆ. ಪರೀಕ್ಷಿಸಲ್ಪಟ್ಟಿದೆ.

★ ಸಿಪ್ಪೆಯನ್ನು ತೆಗೆದ ಕುಂಬಳದ ಬೀಜ ೨ ತೊಲವನ್ನು ರಾತ್ರಿಯಲ್ಲಿ ಗಾಜಿನ ಅಥವಾ ಮಣ್ಣಿನ ಪಾತ್ರೆಯಲ್ಲಿ ೫ ತೊಲ ನೀರಿನಲ್ಲಿ ನೆನೆಹಾಕಿದ್ದು ಪ್ರಾತಃಕಾಲದಲ್ಲಿ ಅದನ್ನು ಕಲ್ಲಿನ ಮೇಲೆ ನುಣ್ಣಗೆ ಅರೆದು ಶೋಧಿಸಿಕೊಂಡು ಅರ್ಧ ತೊಲ ಜೇನುತುಪ್ಪವನ್ನು ಕೂಡಿಸಿ ಕುಡಿಯಬೇಕು. ೧೫ ದಿನಗಳ ವರೆಗೆ ಇದನ್ನು ಬಿಡದೆ ಮಾಡಿದರೆ ಬುದ್ಧಿಭ್ರಮಣೆ ಅಥವಾ ಹುಚ್ಚು ಖಂಡಿತ ಗುಣವಾಗುತ್ತದೆ. ಪರೀಕ್ಷಿಸಲ್ಪಟ್ಟಿದೆ.

★ ಕುಂಬಳದ ಬೀಜ ಅರ್ಧ ತೊಲ, ಬಾದಾಮಿಯ ಬೀಜ ಅರ್ಧ ತೊಲ, ಕೇಸರಿ ೧ ಗುಂಜಿ, ಇವುಗಳನ್ನು ೧೦ ತೊಲ ನೀರಿನೊಡನೆ ಅರೆದು ೨ ತೊಲ ಸಕ್ಕರೆ ಮತ್ತು ೩ ತೊಲ ತುಪ್ಪವನ್ನು ಹಾಕಿ ಕಾಯಿಸಬೇಕು. ಇದನ್ನು ಸುಡುತ್ತಿರುವಾಗಲೇ ಕುಡಿದರೆ ಮೆದಳಿನ ದುರ್ಬಲತೆಯು ನಾಶವಾಗುತ್ತದೆ.

★ ಕುಂಬಳದ ಬೀಜ ಅರ್ಧ ತೊಲ, ಸೂರಣದ ಗಡ್ಡೆ ಅರ್ಧ ತೊಲ, ಬಿಳಿಯ ಗುರುಗಂಜಿ ಅರ್ಧ ತೊಲ, ಈ ಮೂರನ್ನು ಕುಟ್ಟಿ ನೀರಿನೊಡನೆ ಅರೆದು ಒಟ್ಟಿಗೆ ಲೇಪಿಸಬೇಕು. ಆ ಬಟ್ಟೆಯನ್ನು ಬತ್ತಿಯಂತೆ ಸುತ್ತಿ ಅದನ್ನು ಮೂಲವ್ಯಾಧಿಯವರ ಆಸನದೊಳಕ್ಕೆ ೨ ಅಂಗುಲಗಳವರೆಗೆ ಸೇರಿಸುವುದರಿಂದ ಮೊಳಕೆಗಳು ನಾಶವಾಗುತ್ತವೆ. ಪ್ರಯೋಜನಾಭಿಲಾಷಿಗಳು ಈ ಪ್ರಯೋಗವನ್ನು ೩ ದಿನಗಳವರೆಗೆ ತಪ್ಪದಂತೆ ಮಾಡಬೇಕು. ಬಹುದಿನಗಳ ರೋಗವುಳ್ಳವರು ಒಂದು ವಾರದವರೆಗಾದರೂ ಮಾಡಬೇಕು.

## ಬೂದಿಗುಂಬಳಕಾಯಿ

**ಬೂ**ದಿಗುಂಬಳವು ತಂಪು ಗುಣವುಳ್ಳದು, ಮೂತ್ರ ಕಟ್ಟು ಉರಿಮೂತ್ರಗಳನ್ನು ಶಾಂತಿಗೊಳಿಸುವುದು, ಮೂತ್ರಾಶಯದ ವಿಕಾರವನ್ನು ನಿವಾರಿಸುವುದು, ಪಾಂಡುರೋಗ, ಜ್ವರ, ಕ್ಷಯ, ರಕ್ತದ ವಾಂತಿ, ರಕ್ತ ಭೇದಿ ಇವುಗಳಿಗೆ ಶಮನಕಾರಿಯಾದುದು, ಶುದ್ಧ ರಕ್ತವನ್ನು ಹುಟ್ಟಿಸುವುದು, ಯಕೃತ್ತು (ಲೀವರ್) ಮತ್ತು ಹೊಟ್ಟೆಯಲ್ಲಿ ಸೇರಿರುವ ಕಾವನ್ನು ಶಾಂತಗೊಳಿಸುವುದು, ಮೇಹವ್ಯಾಧಿಯನ್ನು ನಿವಾರಿಸಿ ದೇಹ ಪುಷ್ಟಿಯನ್ನು ಕೊಟ್ಟು ವೀರ್ಯ ಮತ್ತು ಬಲವನ್ನು ಸ್ಥಿರಗೊಳಿಸುತ್ತದೆ. ಮಂದಾಗ್ನಿ, ಅಜೀರ್ಣ, ಸಂಗ್ರಹಣೆ ಮೂತ್ರ ಕಲ್ಲು, ಕೃಮಿರೋಗ ಮುಂತಾದವುಗಳ ತೊಂದರೆಯನ್ನು ದೂರ ಮಾಡುತ್ತದೆ. ಮತ್ತು ಕ್ಷಯ ರೋಗಿಗಳಿಗೆ ಇದನ್ನು ಆಹಾರ ರೂಪವಾಗಿ ಕೊಡುವುದರಿಂದ ವಿಶೇಷ ಪ್ರಯೋಜನವುಂಟಾಗುತ್ತದೆ.

★ ಬೂದಿಗುಂಬಳದ ೩ ತೊಲ ರಸಕ್ಕೆ ಕಾಲು ತೊಲ ಯವಕ್ಷಾರ ಮತ್ತು ೧ ತೊಲ ಸಕ್ಕರೆಯನ್ನು ಕೂಡಿಸಿ ಕುಡಿಯುವುದರಿಂದ ತಡೆಯುತ್ತಿರುವ ಮೂತ್ರವು ಖಂಡಿತವಾಗಿ ಕ್ರಮಗೊಳ್ಳುತ್ತದೆ. ಪರೀಕ್ಷಿಸಲ್ಪಟ್ಟಿದೆ.

★ ಈ ಕುಂಬಳದ ೩ ತೊಲ ರಸದಲ್ಲಿ ೪ ಗುಂಜಿ ಯವಕ್ಷಾರ ಮತ್ತು ೨ ಗುಂಜಿ ಹುರಿದ ಹಿಂಗು ಇವುಗಳನ್ನು ಅರೆದು ಕುಡಿಯುವುದರಿಂದ ಕಿಬ್ಬೊಟ್ಟೆಯ ಶೂಲ, ಮೂತ್ರನಾಳದ ಶೂಲ, ಸಕ್ಕರೆ ಹೋಗುವುದು (ಮಧುಮೇಹ) ಮೂತ್ರಕಲ್ಲು, ಇವುಗಳು ಗುಣವಾಗುವುವು.

★ ಉತ್ತಮವಾದ ಬೂದಿಗುಂಬಳಕಾಯಿಯ ರಸ ೫ ಸೇರು, ಹಸುವಿನ ಹಾಲು ೫ ಸೇರು, ಕುಟ್ಟಿ ಬಟ್ಟೆಯಿಂದ ಶೋಧಿಸಿದ ನೆಲ್ಲಿ ಚೆಟ್ಟಿನ ಚೂರ್ಣ ೩೨ ತೊಲ, ಇವುಗಳನ್ನೆಲ್ಲಾ ಕೂಡಿಸಿ ಮಂದಾಗ್ನಿಯಿಂದ ಮೆಲ್ಲನೆ ಕಾಯಿಸುತ್ತಾ ಹೊತ್ತದಂತೆ ಪದೇ ಪದೇ ತಿರುಗಿಸುತ್ತಾ ಗಟ್ಟಿಯಾಗುವವರೆಗೂ ಕುದಿಸಬೇಕು. ಗಟ್ಟಿಯಾಗುವಾಗ ೩೨ ತೊಲ ಬೂರಾ ಸಕ್ಕರೆಯನ್ನು ಹಾಕಿ ಕೂಡಿಸಿ ಕೆಳಗಿಳಿಸಿಬಿಡಬೇಕು. ಈ ''ಖಂಡಕೂಷ್ಮಾಂಡ ಲೇಹ್ಯ''ವನ್ನು ನಿತ್ಯದಲ್ಲಿ ಎರಡೆರಡು ತೊಲದಂತೆ ಸೇವಿಸುವುದರಿಂದ ಬಾಯಿ, ಮೂಗು, ಆಸನ ಮುಂತಾದ ದ್ವಾರಗಳಿಂದ ರಕ್ತವು ಸೋರುತ್ತಿರುವುದು, ಆಮ್ಲಪಿತ್ತ (ಹುಳಿತೇಗು, ಎದೆಯಲ್ಲಿ ಒತ್ತುವುದು, ಹಳದಿಯ ನೀರು ವಾಂತಿಯಾಗುವುದು, ಗಂಟಲು ಎದೆಗಳ ಉರಿ ಮುಂತಾದವು) ಬಾಯಾರಿಕೆ, ಕಾಮಾಲೆ ಇವುಗಳು ಶಾಂತವಾಗುತ್ತವೆ.

★ ಉತ್ತಮವಾದ ದೊಡ್ಡ ಬೂದಿಗುಂಬಳಕಾಯಿಯನ್ನು ತಂದು ಮೇಲಿನ ಸಿಪ್ಪೆಯನ್ನು ತೆಗೆದು ಎರಡು ಹೋಳು ಮಾಡಿ ಬೀಜ ಮತ್ತು ತಿರುಳನ್ನು ತೆಗೆದುಹಾಕಿಬಿಡಿ, ಅನಂತರ ಚೂರುಮಾಡಿ ೧೦ ಪೌಂಡು ಚೂರನ್ನು ತೆಗೆದುಕೊಳ್ಳಿ, ಅದನ್ನು ೧೦ ಸೇರು ನೀರಿನಲ್ಲಿ ಬೇಯಿಸಿರಿ, ಅರ್ಧ ನೀರು ನಿಂತಮೇಲೆ ಇಳಿಸಿರಿ, ತಣ್ಣಗಾದ ಮೇಲೆ ಕುಂಬಳದ ಚೂರುಗಳನ್ನು ತೆಗೆದುಕೊಂಡು ಒಂದು ದಪ್ಪ ಬಟ್ಟೆಯಲ್ಲಿ ಹಾಕಿ ಒತ್ತಿ ಒತ್ತಿ ರಸವನ್ನು ಮೊದಲಿನ ಪಾತ್ರೆಗೇ ಹಿಂಡಿಕೊಳ್ಳಿ, ಈ ನೀರನ್ನು ಒಂದು ಕಡೆ ಇಟ್ಟುಬಿಡಿ. ಹಿಂಡಿರುವ ಕುಂಬಳದ ಚೂರುಗಳನ್ನು ಸ್ವಲ್ಪಹೊತ್ತು ಬಿಸಿಲಿನಲ್ಲಿ ಆರಿಸಿರಿ. ಅನಂತರ ಒಂದು ಪಾತ್ರೆಯಲ್ಲಿ ೬೪ ತೊಲ ತುಪ್ಪವನ್ನು ಹಾಕಿ ಒಲೆಯ ಮೇಲಿಟ್ಟು ಕಾಯಿಸಿರಿ, ತುಪ್ಪವು ಕಾಯ್ದಮೇಲೆ ಈ ಚೂರುಗಳನ್ನು ತುಪ್ಪದಲ್ಲಿ ಹಾಕಿ ಕೆಂಪಾಗುವವರೆಗೆ ಹುರಿಯಿರಿ. ಅನಂತರ ಬೇರೆ ಇಟ್ಟಿರುವ ನೀರನ್ನೂ ಮತ್ತು ೧೦ ಪೌಂಡು ಕಲ್ಲುಸಕ್ಕರೆಯನ್ನೂ ಹಾಕಿ ಮಂದಾಗ್ನಿಯಿಂದ ಕಾಯಿಸಿರಿ. ಪಾಕವು ಬಂದಮೇಲೆ ಕೆಳಗಿಳಿಸಿಬಿಡಿ. ಬಿಸಿಯಾಗಿರುವಾಗಲೇ ಈ ಕೆಳಗೆ ಕಾಣಿಸಿರುವ ಚೂರ್ಣವನ್ನು ಮೊದಲೇ ಸಿದ್ಧಮಾಡಿಟ್ಟುಕೊಂಡಿದ್ದು ಹಾಕಬೇಕು. ಹಿಪ್ಪಲಿ ೮ ತೊಲ, ಶುಂಠಿ ೮ ತೊಲ, ಜೀರಿಗೆ ೮ ತೊಲ, ಕೊತ್ತುಂಬರಿಬೀಜ ೨ ತೊಲ, ತೇಜಪತ್ರೆ ೨ ತೊಲ, ಏಲಕ್ಕಿ ೨ ತೊಲ, ಮೆಣಸು ೨ ತೊಲ, ದಾಲಚೀನಿ ೨ ತೊಲ ಇವುಗಳ ಚೂರ್ಣವನ್ನು ಕೂಡಿಸಿ ಪೂರ್ತಿ ತಣ್ಣಗಾದನಂತರ ೩೨ ತೊಲ ಜೇನುತುಪ್ಪವನ್ನು ಕೂಡಿಸಿ ಬೇರೆ ಪಾತ್ರೆ ಅಥವಾ ಜಾಡಿಯಲ್ಲಿ ಇಟ್ಟುಕೊಳ್ಳಿ. ನಿತ್ಯದಲ್ಲಿ ೧ ರಿಂದ ೨ ತೊಲಗಳವರೆಗೆ ಅವರವರ ಶಕ್ತಿ ಮತ್ತು ಅಗ್ನಿಯಬಲವನ್ನು ನೋಡಿಕೊಂಡು ಮೇಕೆಯ ಅಥವಾ ಹಸುವಿನ ಹಾಲಿನೊಡನೆ ಸೇವಿಸಬೇಕು. ಇದರ ಸೇವನೆಯಿಂದ ರಕ್ತಪಿತ್ತ, ಪಿತ್ತಜ್ವರ, ಬಾಯಾರಿಕೆ, ಪ್ರದರ ಒಣಗಿ ಕೊಂಡಿರುವುದು, ವಾಂತಿ, ಕೆಮ್ಮಲು, ಉಬ್ಬಸ, ಎದೆನೋವು, ಧ್ವನಿ ಕುಗ್ಗುವುದು, ಕ್ಷಯ, ಎದೆಯಗಾಯ, ಲೀವರ್ರಿನ ಬೆಳವಣಿಗೆ ಇವೆಲ್ಲವೂ ನಾಶವಾಗುತ್ತವೆ. ಮತ್ತು ಇದು ಬಲವರ್ಧಕವೂ ಪುಷ್ಟಿಕರವೂ ಆಗಿರುತ್ತದೆ. ಎಷ್ಟೋಸಲ ಪರೀಕ್ಷಿಸಲ್ಪಟ್ಟಿದೆ.

★ ಬೂದಿಗುಂಬಳದ ಬೇರಿನ ರಸ ೧ ತೊಲ ಅಥವಾ ಬೂದಿಗುಂಬಳದ ಬೇರಿನ ಚೂರ್ಣ ಅಥವಾ ಬೂದಿಗುಂಬಳದ ಎಲೆಯ ಚೂರ್ಣ ಇವುಗಳಲ್ಲಿ ಯಾವುದನ್ನಾದರೂ ಬಿಸಿನೀರಿನೊಡನೆ ಸೇವಿಸುವುದರಿಂದ ದಮ್ಮು, (ಗೂರಲು) ಕೆಮ್ಮುಗಳು ಬಹುಬೇಗನೆ ಹಿಮ್ಮುಖವಾಗುವುವು ಮತ್ತು ಕ್ರಮದಿಂದ ಗುಣವನ್ನೂ ಹೊಂದುವುದು. ಪರೀಕ್ಷಿಸಲ್ಪಟ್ಟಿದೆ.

★ ಬೂದಿಗುಂಬಲದ ಬೀಜ, ಸೌತೆಕಾಯಿಯ ಬೀಜ, ಇವರೆಡನ್ನೂ ನೀರಿನೊಡನೆ ಅರೆದು ಕಿಬ್ಬೊಟ್ಟೆಗೆ ಮಂದವಾಗಿ ಲೇಪಿಸುವುದರಿಂದ ಮೂತ್ರದ ತಡೆಯು ದೂರವಾಗಿ ಮೂತ್ರವಿಸರ್ಜನೆಯು ಆಯಾಸವಿಲ್ಲದೆ ಆಗುತ್ತದೆ.

★ ಬೂದಿಗುಂಬಳದ ರಸಕ್ಕೆ ಯವಕ್ಷಾರ ಮತ್ತು ಬೆಲ್ಲವನ್ನು ಕೂಡಿಸಿ ಕುಡಿಯುವುದರಿಂದ ಮೂತ್ರದ ತಡೆ, ಮೂತ್ರದ ಕಲ್ಲು ಮತ್ತು ಸಕ್ಕರೆ ಹೋಗುವಿಕೆ ಮುಂತಾದವುಗಳು ಗುಣವಾಗುತ್ತವೆ. ಪರೀಕ್ಷಿಸಲ್ಪಟ್ಟಿದೆ.

❄





## ಲೋಕಸಭೆಯ ಸಭಾಧ್ಯಕ್ಷರುಗಳು

| ಕ್ರಮ ಸಂಖ್ಯೆ | ಹೆಸರು | ಅಧಿಕಾರದ ಅವಧಿ | ಲೋಕಸಭೆ |
|---|---|---|---|
| | ಶ್ರೀಯುತರುಗಳಾದ : | | |
| 1. | ಜಿ.ವಿ. ಮಾವಳಂಕರ್ | 15-05-1952 ರಿಂದ 27-02-1956 | (1ನೇ ಲೋಕಸಭೆ) |
| 2. | ಎಂ. ಅನಂತಶಯನಂ ಅಯ್ಯಂಗಾರ್ | 08-03-1956 ರಿಂದ 10-05-1957 | (1ನೇ ಲೋಕಸಭೆ) |
| 3. | ಎಂ. ಅನಂತಶಯನಂ ಅಯ್ಯಂಗಾರ್ | 11-05-1957 ರಿಂದ 16-04-1962 | (2ನೇ ಲೋಕಸಭೆ) |
| 4. | ಸರದಾರ್ ಹುಕುಂಸಿಂಗ್ | 17-04-1962 ರಿಂದ 16-03-1967 | (3ನೇ ಲೋಕಸಭೆ) |
| 5. | ಎನ್. ಸಂಜೀವರೆಡ್ಡಿ | 17-03-1967 ರಿಂದ 19-07-1969 | (4ನೇ ಲೋಕಸಭೆ) |
| 6. | ಡಾ ॥ ಜಿ.ಎಸ್. ಧಿಲ್ಲೋನ್ | 08-08-1969 ರಿಂದ 19-03-1971 | (4ನೇ ಲೋಕಸಭೆ) |
| 7. | ಡಾ ॥ ಜಿ.ಎಸ್. ಧಿಲ್ಲೋನ್ | 22-3-1971 ರಿಂದ 01-12-1975 | (5ನೇ ಲೋಕಸಭೆ) |
| 8. | ಬಿ.ಆರ್. ಭಗತ್ | 05-01-1976 ರಿಂದ 25-03-1977 | (5ನೇ ಲೋಕಸಭೆ) |
| 9. | ಎನ್. ಸಂಜೀವ ರೆಡ್ಡಿ | 26-03-1977 ರಿಂದ 13-07-1977 | (6ನೇ ಲೋಕಸಭೆ) |
| 10. | ಕೆ.ಎಸ್. ಹೆಗಡೆ | 21-07-1997 ರಿಂದ 21-10-1980 | (6ನೇ ಲೋಕಸಭೆ) |
| 11. | ಡಾ ॥ ಬಲರಾಂ ಜಾಕರ್ | 21-01-1980 ರಿಂದ 15-01-1985 | (7ನೇ ಲೋಕಸಭೆ) |
| 12. | ಡಾ ॥ ಬಲರಾಂ ಜಾಕರ್ | 16-01-1985 ರಿಂದ 18-12-1989 | (8ನೇ ಲೋಕಸಭೆ) |
| 13. | ರಬಿ ರೇ | 19-12-1989 ರಿಂದ 09-07-1991 | (9ನೇ ಲೋಕಸಭೆ) |
| 14. | ಶಿವರಾಜ ಪಾಟೀಲ್ | 10-07-1991 ರಿಂದ 22-05-1996 | (10ನೇ ಲೋಕಸಭೆ) |
| 15. | ಪಿ.ವಿ. ಸಂಗ್ಮಾ | 23-05-1996 ರಿಂದ 23-03-1998 | (11ನೇ ಲೋಕಸಭೆ) |
| 16. | ಜಿ.ಎಂ.ಸಿ. ಬಾಲಯೋಗಿ | 24-03-1998 ರಿಂದ 20-10-1999 | (12ನೇ ಲೋಕಸಭೆ) |
| 17. | ಜಿ.ಎಂ.ಸಿ. ಬಾಲಯೋಗಿ | 22-10-1999 ರಿಂದ | (13ನೇ ಲೋಕಸಭೆ) |

## ಲೋಕಸಭೆಯ ಉಪ ಸಭಾಧ್ಯಕ್ಷರುಗಳು

| | | | |
|---|---|---|---|
| 1. | ಎಂ. ಅನಂತಶಯನಂ ಅಯ್ಯಂಗಾರ್ | 30-05-1952 ರಿಂದ 07-03-1956 | (1ನೇ ಲೋಕಸಭೆ) |
| 2. | ಸರ್ದಾರ್ ಹುಕುಂಸಿಂಗ್ | 20-3-1956 ರಿಂದ 04-04-1957 | (1ನೇ ಲೋಕಸಭೆ) |
| 3. | ಸರ್ದಾರ್ ಹುಕುಸಿಂಗ್ | 17-05-1957 ರಿಂದ 31-03-1962 | (2ನೇ ಲೋಕಸಭೆ) |
| 4. | ಎಸ್.ವಿ. ಕೃಷ್ಣಮೂರ್ತಿರಾವ್ | 23-04-1962 ರಿಂದ 03-03-1967 | (3ನೇ ಲೋಕಸಭೆ) |
| 5. | ಆರ್.ಕೆ. ಖಾಡಿಲ್‌ಕರ್ | 28-03-1967 ರಿಂದ 01-11-1969 | (4ನೇ ಲೋಕಸಭೆ) |
| 6. | ಜಿ.ಜಿ. ಸ್ವೆಲ್ | 09-12-1969 ರಿಂದ 27-12-1970 | (4ನೇ ಲೋಕಸಭೆ) |
| 7. | ಜಿ.ಜಿ. ಸ್ವೆಲ್ | 27-03-1971 ರಿಂದ 18-01-1977 | (5ನೇ ಲೋಕಸಭೆ) |
| 8. | ಗೋಡೆ ಮುರಹರಿ | 01-04-1977 ರಿಂದ 22-08-1979 | (6ನೇ ಲೋಕಸಭೆ) |
| 9. | ಜಿ. ಲಕ್ಷ್ಮಣನ್ | 01-02-1980 ರಿಂದ 31-12-1984 | (7ನೇ ಲೋಕಸಭೆ) |
| 10. | ಎಂ. ತಂಬಿದೊರೈ | 22-01-1985 ರಿಂದ 27-11-1989 | (8ನೇ ಲೋಕಸಭೆ) |
| 11. | ಶಿವರಾಜ್ ವಿ. ಪಾಟೀಲ್ | 19-03-1990 ರಿಂದ 13-03-1991 | (9ನೇ ಲೋಕಸಭೆ) |
| 12. | ಎಸ್. ಮಲ್ಲಿಕಾರ್ಜುನಯ್ಯ | 13-08-1991 ರಿಂದ 10-05-1996 | (10ನೇ ಲೋಕಸಭೆ) |
| 13. | ಸೂರಜ್ ಬಾನ್ | 12-07-1996 ರಿಂದ 04-12-1997 | (11ನೇ ಲೋಕಸಭೆ) |
| 14. | ಪಿ.ಎಂ. ಸಯೀದ್ | 17-12-1998 ರಿಂದ 26-04-1999 | (12ನೇ ಲೋಕಸಭೆ) |
| 15. | ಪಿ.ಎಂ. ಸಯೀದ್ | 27-10-1999 ರಿಂದ | (13ನೇ ಲೋಕಸಭೆ) |

# ಶ್ರೀ ಕ್ಷೇತ್ರದಲ್ಲಿ ಮಹಾತ್ಮಗಾಂಧಿ ಮತ್ತು ಲಾಲ್‌ಬಹದ್ದೂರ್ ಶಾಸ್ತ್ರಿಯವರ ಜಯಂತ್ಯುತ್ಸವ

ಶ್ರೀ ಸಿದ್ಧಗಂಗಾಮಠದ ಸನಿವಾಸ ವಿದ್ಯಾಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿ ಸಂಘವು ದಿನಾಂಕ : ೨-೧೦-೨೦೦೧ರಂದು ಮುಂಜಾನೆ ಶ್ರೀಕ್ಷೇತ್ರದ ಉದ್ದಾನೇಶ್ವರ ಸಮುದಾಯ ಭವನ ದಲ್ಲಿ ಮಹಾತ್ಮ ಗಾಂಧೀಜಿ ಮತ್ತು ಲಾಲ್ ಬಹದೂರ್ ಶಾಸ್ತ್ರಿಯವರ ಜಯಂತಿ ಕಾರ್ಯಕ್ರಮವನ್ನು ಆಯೋಜಿಸಿತ್ತು.

ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ತ್ರಿವಿಧ ದಾಸೋಹ ಮೂರ್ತಿಗಳು, ಪರಮತಪೋಧನರೂ ಆದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ದಿವ್ಯಸಾನ್ನಿಧ್ಯವನ್ನು ವಹಿಸಿದ್ದರು. ಖ್ಯಾತ ಸಾಹಿತಿಗಳೂ ಕರ್ನಾಟಕ ಸರ್ಕಾರದ ರಾಜಭಾಷಾ ಆಯೋಗದ ಸದಸ್ಯರಾದ ಶ್ರೀ ಟಿ.ಆರ್. ಮಹಾದೇವಯ್ಯನವರು ಅತಿಥಿಗಳಾಗಿ ಆಗಮಿಸಿದ್ದರು. ಸಂಯುಕ್ತ ಸಂಘದ ಪದಾಧಿಕಾರಿಗಳು ಶ್ರದ್ಧೆಯಿಂದ ಕಾರ್ಯಕ್ರಮವನ್ನು ನಡೆಸಿಕೊಟ್ಟರು. ಸಂಘದ ಸಂಚಾಲಕರು ಹಾಗೂ ''ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆ ಶ್ರೀ ಸಿದ್ಧಗಂಗಾ ಮಠ ಈ ಶಾಲೆಯ ಮುಖ್ಯ ಶಿಕ್ಷಕರಾದ ಶ್ರೀ ಕೆ.ಎಚ್. ಶಿವರುದ್ರಯ್ಯನವರು ಎಲ್ಲರನ್ನೂ ಸ್ವಾಗತಿಸಿ ಅತಿಥಿಗಳನ್ನು ಪರಿಚಯ ಮಾಡಿಕೊಟ್ಟರು.

ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ, ವೇದಿಕೆಯಲ್ಲಿ ಶ್ರೀ ಟಿ.ಆರ್. ಮಹಾದೇವಯ್ಯ ಅವರನ್ನು ಕಾಣಬಹುದು.

ಶ್ರೀ ಟಿ.ಆರ್. ಮಹಾದೇವಯ್ಯನವರು ಗಾಂಧೀಜಿ ಮತ್ತು ಲಾಲ್‌ಬಹದೂರ್‌ಜಿಯವರ ಜನ್ಮದಿನ ಅಕ್ಟೋಬರ್ ೨ನೇ ತಾರೀಖು ಆಗಿದ್ದು ಇಬ್ಬರು ಮಹಾನ್ ವ್ಯಕ್ತಿಗಳ ನೆನಪು ಮಾಡಿಕೊಳ್ಳುವ ಪವಿತ್ರದಿನವಾಗಿದೆ ಎಂದರು. ದೊಡ್ಡವರ ಬದುಕಿನ ದಿವ್ಯ ನೆನಪು ಹೇಗೆ ನಮ್ಮ ಬಾಳನ್ನು ಉಜ್ವಲಗೊಳಿಸುತ್ತದೆ ಎಂಬುದನ್ನು ದೃಷ್ಟಾಂತಪೂರ್ವಕವಾಗಿ ವಿವರಿಸಿದರು. ಆ ಇಬ್ಬರ ಬದುಕು ನಿಷ್ಠೆ, ಪ್ರಾಮಾಣಿಕತೆ, ತ್ಯಾಗ ಅಪ್ಪಟ ರಾಷ್ಟ್ರಭಕ್ತಿಗೆ ಮೀಸಲಾಗಿದ್ದು ಭಾರತಕ್ಕೆ ಸ್ವಾತಂತ್ರ್ಯ ತಂದು ಕೊಡಲು ಅವರು ತಮ್ಮ ಸರ್ವಸ್ವವನ್ನು ಸಮರ್ಪಿಸಿದ್ದನ್ನು ನೆನಪಿಸಿದರು. ಸರಳ ಜೀವನ ಉದಾತ್ತ ಚಿಂತನ ತತ್ವಕ್ಕೆ ಅವರು ಬದುಕು ಉತ್ಕೃಷ್ಟ ನಿದರ್ಶನವಾಗಿದೆ. ಅವರ ಬದುಕನ್ನು ಸರಿಯಾದ ರೀತಿಯಲ್ಲಿ ನಾವು ಅರ್ಥಮಾಡಿಕೊಳ್ಳಬೇಕು – ಅವರ ಸತ್ಯಸಂಧತೆ, ಋಜು ಜೀವನ ಸ್ವಾರ್ಥವಿಲ್ಲದೆ ಲೋಕಚಿಂತೆ, ದೀನದಲಿತರ ಬಗೆಗಿನ ಕಾಳಜಿ ಅವರನ್ನು ಮಹಾತ್ಮರಾಗಿಸಿತು, ಲೋಕಪೂಜ್ಯರನ್ನಾಗಿಸಿತು. ಅವರು ಅಮರರಾದರು. ಅಂಥ ಮಹಾವ್ಯಕ್ತಿಗಳ ನೆನಪನ್ನು ನಾವು ಇಂದು ಮತ್ತೊಬ್ಬ ಮಹಾತ್ಮರ ದಿವ್ಯ ಸನ್ನಿಧಿಯಲ್ಲಿ ಮಾಡಿಕೊಳ್ಳುತ್ತಿದ್ದೇವೆ. ಇದರಿಂದಾಗಿ ನಮ್ಮ ಪುಣ್ಯಕ್ಕೆ ಬಣ್ಣವೇರಿದೆ ಎಂದು ಶ್ರೀಮಹಾದೇವಯ್ಯನವರು ಅಭಿಮಾನಪಟ್ಟರು.

ಪೂಜ್ಯರು ಆಶೀರ್ವಚನ ನೀಡುತ್ತಾ ಸ್ವಾತಂತ್ರಪೂರ್ವದಲ್ಲಿ ಭಾರತಕ್ಕೆ ಒದಗಿದ್ದ ದುರ್ದೆಸೆಯನ್ನು ನೆನೆದರು. ಭಾರತೀಯರು ತಮ್ಮತನವನ್ನು ಮರೆತು ಆತ್ಮಸಂಪತ್ತಿನಿಂದ ವಂಚಿತರಾಗಿ ಹೇಡಿಗಳಾಗಿದ್ದಾಗ ಗಾಂಧೀಜಿ ಮುಂದೆ ಬಂದರು. ಅವರು ತಮ್ಮ ಉಜ್ವಲ ನಡೆ-ನುಡಿಗಳಿಂದ ಇಡೀ ಭರತಖಂಡವನ್ನು ಜಾಗೃತಗೊಳಿಸಿದರು. ಸತ್ಯ-ಅಹಿಂಸೆಗಳೆಂಬ ಮಹಾಸ್ತ್ರಗಳನ್ನು ಮುಂದಿರಿಸಿ ಬ್ರಿಟೀಷ್ ಸಾಮ್ರಾಜ್ಯಶಾಹಿಯನ್ನು ಮಣಿಸಿದರು. ಗ್ರಾಮರಾಜ್ಯ, ಅಂತ್ಯೋದಯ, ಹರಿಜನರುದ್ಧಾರ ಮೊದಲಾದ ಸರ್ವರ ಉದ್ಧಾರದ ಯೋಜನೆಗಳನ್ನು ಕಾರ್ಯರೂಪಕ್ಕಿಳಿಸಿದರು. ಅವರ ಮಾರ್ಗದರ್ಶನ ಇನ್ನುಬೇಕು ಎನ್ನುವಾಗಲೇ ಅವರು ಇಲ್ಲವಾದರು. ಅದರಂತೆ ಲಾಲ್‌ಬಹದ್ದೂರ್ ಶಾಸ್ತ್ರಿ ಅಪ್ಪಟ ದೇಶಭಕ್ತ, ದೀನದಲಿತರ ಸೇವೆಯೇ ಅವರ ಪರಮಗುರಿಯಾಗಿತ್ತು. ರಾಷ್ಟ್ರದ ಪ್ರಧಾನಿಯಾಗಿದ್ದರೂ ಸರಳ ಜೀವನ ನಡೆಸಿದ ಆದರ್ಶ ಅವರದು.

ಇಂಥ ಮಹಾತ್ಮರ ಕೆಲವು ಗುಣಗಳನ್ನಾದರೂ ನಾವು ಬದುಕಿನಲ್ಲಿ ಅಳವಡಿಸಿಕೊಂಡರೆ ಅವರ ಜಂಯತಿ ಯನ್ನು ಆಚರಿಸಿದ್ದಕ್ಕೆ ಸಾರ್ಥಕವಾಗುತ್ತದೆ ಎಂದು ಅನುಗ್ರಹಿಸಿದರು.

ಶ್ರೀ ಪಿ.ಆರ್. ಸೋಮಶೇಖರ್ ಅವರು ಪೂಜ್ಯರಿಗೆ ಮತ್ತು ಅತಿಥಿಗಳಿಗೆ ಫಲಪುಷ್ಪಗಳನ್ನು ಸಮರ್ಪಿಸಿ, ಆಹ್ವಾನಿತರಿಗೆಲ್ಲಾ ಆಭಾರಮನ್ನಿಸಿದರು. ಶ್ರೀ ಕೆ. ಬಿ. ಶಿವಶಂಕರಯ್ಯ ಅವರು ಕಾರ್ಯಕ್ರಮವನ್ನು ನಿರೂಪಿಸಿದರು. ಹೀಗೆ ರಾಷ್ಟ್ರಪಿತ ಬಾಪೂಜಿ ಹಾಗೂ ರಾಷ್ಟ್ರಭಕ್ತ ಲಾಲಾಜಿಯವರ ಜಯಂತಿ ಸಮಾರಂಭ ಅರ್ಥಪೂರ್ಣವಾಗಿ ನಡೆದು ಪಾಲ್ಗೊಂಡಿದ್ದ ಎಲ್ಲರ ಮನದಲ್ಲಿ ಆ ಮಹಾತ್ಮರ ದಿವ್ಯ ನೆನಪನ್ನು ಮೂಡಿಸಿತ್ತು.

ವರದಿ : ಎಂ. ರೇಣುಕಾರಾಧ್ಯ



ಕ್ಷೇತ್ರವಾರ್ತೆ

# ಶ್ರೀಮಠದಲ್ಲಿ ಸಂಭ್ರಮದ ವಿಜಯದಶಮಿ

'ಧಾರ್ಮಿಕ ದಿವಾಳಿಯಿಂದ ನಾವಿಂದು ಸಾಂಸ್ಕೃತಿಕ ಬಡತನವನ್ನು ಅನುಭವಿಸುತ್ತಿದ್ದೇವೆ. ದೇವರನ್ನು ಮರೆತು ಸಂಕಷ್ಟಕ್ಕೊಳಗಾಗಿದ್ದೇವೆ. ಭಾರತ ಜಗತ್ತಿಗೇ ಬೆಳಕು ತೋರಿದ ರಾಷ್ಟ್ರ. ಭಾರತದ ಅಭಿವೃದ್ಧಿಯಲ್ಲಿ ಜಗತ್ತಿನ ಅಭಿವೃದ್ಧಿಯಿದೆ. ಯುದ್ಧದಿಂದ ನರಳುತ್ತಿರುವ ದೇಶಗಳಿಂದು ಜೀವನ ಕಲೆಯನ್ನು ಅರಿಯಬೇಕಾಗಿದೆ. ಕರ್ನಾಟಕದಲ್ಲಿ ಉದಯಿಸಿದ ಬಸವಾದಿ ಶರಣರು, ಶ್ರೀ ಸಿದ್ಧಲಿಂಗೇಶ್ವರರಂಥ ಮಹಾನುಭಾವರು ಲೋಕ ಕಲ್ಯಾಣಗೈದರು. ಅವರ ಸಂದೇಶವನ್ನರಿತು ನಾವಿಂದು ನಡೆಯಬೇಕಾಗಿದೆ', ಎಂಬುದಾಗಿ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಸಮಾರಂಭದ ಸಾನ್ನಿಧ್ಯ ವಹಿಸಿ ಧರ್ಮಸಂದೇಶ ನೀಡಿದರು.



ಆಯುಧಪೂಜೆ ಅಂಗವಾಗಿ ಶ್ರೀ ಕ್ಷೇತ್ರದ ಆರಾಧ್ಯದೈವ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಉತ್ಸವ ಮೂರ್ತಿಗೆ ಪೂಜೆ ಮತ್ತು ವೇದ ಪಠಣ

''ವಿಜಯದಶಮಿ ವಿಶಿಷ್ಟವಾದ ಹಬ್ಬ, ನಾಡಹಬ್ಬ ವಿಜಯನಗರದ ಅರಸರು ಮೊದಲಾಗಿ ಮೈಸೂರು ಅರಸರಿಂದ ಮುಂದುವರಿದು ಕನ್ನಡ ಸಂಸ್ಕೃತಿಯ ಸಂಕೇತವೆಂಬಂತೆ ಬೆಳೆದು ಬಂದಿದೆ. ಸಂಗೀತ, ಸಾಹಿತ್ಯ, ಕಲೆ, ಕ್ರೀಡೆಗಳ ಸಂವರ್ಧನೆಗೆ ಕಾರಣವಾದುದಾಗಿದೆ. ನಮ್ಮಲ್ಲಿರುವ ಅಸುರೀಗುಣಗಳನ್ನು ಕಳೆದುಕೊಳ್ಳುವ ಮಾನವೀಯ ಗುಣಗಳನ್ನು ಬೆಳೆಸಿಕೊಳ್ಳುವ ಹಬ್ಬವಾಗಿದೆ. ತಾಯಿಯ ಋಣವನ್ನು ತೀರಿಸಲು ಅವಕಾಶವಿದಾಗಿದೆ'' ಎಂದು ಆಶೀರ್ವಚನ ನೀಡಿದವರು ಶ್ರೀಮಠದ ಉತ್ತರಾಧಿಕಾರಿಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು.

ನಮ್ಮಲಿಂದು ಲಾಡನ್‌ಗಳು, ಬುಷ್‌ಗಳು ಎಲ್ಲೆಲ್ಲೂ ಇದ್ದಾರೆ. ಅವರಿಬ್ಬರಿಂದಲೂ ಜಗತ್ತಿಂದು ಉಳಿಯಬೇಕಾಗಿದೆ. ಅದಕ್ಕಾಗಿ ಗುರು ಶಿಷ್ಯನಿಗೆ ದೀಪಕೊಟ್ಟಿದ್ದಾನೆ. ಗುಲಾಬಿ ಕೊಟ್ಟಿದ್ದಾನೆ, ಸೂಜಿಕೊಟ್ಟಿದ್ದಾನೆ. ಕತ್ತಲಿರುವ ಕಡೆ ದೀಪ ಹೊಚ್ಚಬೇಕಾಗಿದೆ, ದುರ್ವಾಸನೆ ಇದ್ದಲ್ಲಿ ಗುಲಾಬಿ ಅರಳಿಸ ಬೇಕಾಗಿದೆ, ಮನಸ್ಸು ಹರಿದು ಹೋಗಿವೆ. ಆದುದರಿಂದ ಸೂಜಿ ಕೆಲಸ ಮಾಡಬೇಕಾಗಿದೆ. ಶ್ರೀಮಠದ ಧ್ಯೇಯವೂ ಇದೇ ಆಗಿದೆ'' ಎಂದು ಪ್ರೊ. ಹೆಚ್.ವಿ. ವೀರಭದ್ರಯ್ಯ ಉಪನ್ಯಾಸ ನೀಡಿದರು.



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ

ಶ್ರೀ ಬಿ.ಎಸ್. ಮಲ್ಲಿಕಾರ್ಜುನಯ್ಯ, ಶ್ರೀ ಶಿವಕುಮಾರ್, ಶ್ರೀ ಶಿವಶಂಕರ್, ಶ್ರೀ ಗಂಗಪ್ಪ ಅವರಿಂದ ವಚನ ಗಾಯನವಾಯಿತು. ಶ್ರೀಕ್ಷೇತ್ರದ ಅಧಿದೇವತೆ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಗೆ ರಾಜೋಪಚಾರವಾಯಿತು. ಶ್ರೀ ಕೆ.ಎಸ್. ಶಂಕರಯ್ಯನವರು ಸ್ವಾಗತಿಸಿದರು. ಶ್ರೀ ಪಿ.ಎನ್. ಚಂದ್ರಶೇಖರ್ ವಂದನೆ ಸಲ್ಲಿಸಿದರು. ಉತ್ಸವದಲ್ಲಿ ನೆರೆದಿದ್ದ ಸಹಸ್ರಾರು ಭಕ್ತಾದಿಗಳು ಬನ್ನಿ ಪತ್ರೆ ಮುಡಿದು ಕೃತಾರ್ಥತೆಯನ್ನು ಅನುಭವಿಸಿದರು. ಶ್ರೀ ಮಲ್ಲವೀರಯ್ಯನವರು ಮತ್ತು ಶ್ರೀ ಎಂ.ಎಸ್. ಚಂದ್ರಶೇಖರಯ್ಯ ಅವರ ಮಾರ್ಗದರ್ಶನದಲ್ಲಿ ರಾಜೋಪಚಾರ, ಪೂಜಾದಿ ಕಾರ್ಯಗಳು ಯಶಸ್ವಿಯಾಗಿ ಜರುಗಿದವು.

# ಸಂಸ್ಕೃತ ಶಿಕ್ಷಕ ಪ್ರಶಿಕ್ಷಕ ವರ್ಗಃ - ಒಂದು ವರದಿ

ಶ್ರೀ ಕ್ಷೇತ್ರದಲ್ಲಿರುವ ಶ್ರೀ ಸಿದ್ಧಲಿಂಗೇಶ್ವರ ಸಂಸ್ಕೃತ ಮಹಾವಿದ್ಯಾಲಯದಲ್ಲಿ ಅಕ್ಟೋಬರ್ ೨ರಿಂದ ೧೨ರವರೆಗೆ ''ಸಂಸ್ಕೃತ ಶಿಕ್ಷಕ ಪ್ರಶಿಕ್ಷಕವರ್ಗಃ'ವನ್ನು ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದ ಸಹಯೋಗವನ್ನು ಬೆಂಗಳೂರಿನಲ್ಲಿರುವ ಅಕ್ಷರಂನ ''ಸಂಸ್ಕೃತ ಭಾರತೀ'ಯು ವಹಿಸಿಕೊಂಡಿತ್ತು.

ಅಕ್ಟೋಬರ್ ೨ರಂದು ಕಾರ್ಯಕ್ರಮವನ್ನು ಕಿರಿಯ ಶ್ರೀಗಳಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಜ್ಯೋತಿಬೆಳಗಿಸಿ ಉದ್ಘಾಟಿಸಿದರು.



ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಜ್ಯೋತಿ ಬೆಳಗಿಸುವುದರ ಮೂಲಕ ಕಾರ್ಯಕ್ರಮದ ಉದ್ಘಾಟನೆ. ಈ ಸಂದರ್ಭದಲ್ಲಿ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಕಾರ್ಯದರ್ಶಿ, ಶ್ರೀ ಟಿ.ಕೆ. ನಂಜುಂಡಪ್ಪ, ದಕ್ಷಿಣ ಪ್ರಾಂತೀಯ ಸಂಘಟನಕಾರ ಶ್ರೀ ಸತ್ಯನಾರಾಯಣ, ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಪ್ರಾಂಶುಪಾಲ ಡಾ. ಎಂ.ಎನ್. ಚನ್ನಬಸಪ್ಪ ಹಾಗೂ ಶ್ರೀ ಸಿದ್ಧಲಿಂಗೇಶ್ವರ ವೇದ ಮತ್ತು ಸಂಸ್ಕೃತ ಕಾಲೇಜಿನ ಪ್ರಾಚಾರ್ಯ ಶ್ರೀ ಪಿ.ಎನ್. ಚಂದ್ರಶೇಖರ್ ಅವರು ಉಪಸ್ಥಿತರಿದ್ದರು.

ನಿರ್ದಿಷ್ಟವಾದ ಹಲವು ಉದ್ದೇಶಗಳನ್ನು ಇಟ್ಟುಕೊಂಡು ಈ ಕಾರ್ಯಕ್ರಮವನ್ನು ರೂಪಿಸಲಾಗಿತ್ತು. ಸಂಸ್ಕೃತ ಭಾಷೆಯನ್ನು ಕಲಿಯದವರಿಗಾಗಿ ಒಂದುಗಣ, ಕಲಿತವರಿಗಾಗಿ ಇನ್ನೊಂದು ಗಣ ಮತ್ತು ಪಾಠಮಾಡುವವರಿಗಾಗಿ ಮತ್ತೊಂದು ಹೀಗೆ ಮೂರು ಗಣಗಳನ್ನಾಗಿ ವರ್ಗೀಕರಿಸಲಾಗಿತ್ತು.

ಸಂಸ್ಕೃತ ಭಾಷೆಯನ್ನು ಕಲಿಯುವರಿಗಾಗಿ ಪ್ರತಿದಿನ ಆದರ್ಶ ಸಂಭಾಷಣಾ ಶಿಬಿರವನ್ನು ಏರ್ಪಡಿಸಲಾಗಿತ್ತು. ಈ ಶಿಬಿರದಲ್ಲಿ ಶ್ರೀಕ್ಷೇತ್ರದಲ್ಲಿ ಪ್ರೌಢಶಾಲೆ ಹಾಗೂ ಪ್ರೈಮರಿ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿ, ವಿದ್ಯಾರ್ಥಿನಿಯರು ಹಾಗೂ ತುಮಕೂರು, ಕ್ಯಾತ್ಸಂದ್ರ ನಗರಗಳಿಂದ ಬಂದ ಪ್ರೌಢಸಕ್ತರೂ ಭಾಗವಹಿಸಿ ಕೇವಲ ಹತ್ತು ದಿನಗಳಲ್ಲಿ ಸಂಸ್ಕೃತ ಭಾಷೆಯನ್ನು ವ್ಯಾವಹಾರಿಕವಾಗಿ ಮಾತನಾಡುವ ಸಾಮರ್ಥ್ಯವನ್ನು ಪಡೆದುಕೊಂಡರು. ಮೊದಮೊದಲು ಇದು ಕೇವಲ ಹತ್ತುದಿನಗಳಲ್ಲಿ ಸಾಧ್ಯವೇ? ಎಂದು ಶಂಕೆಯನ್ನು ವ್ಯಕ್ತಪಡಿಸುತ್ತಿದ್ದವರೂ ಪ್ರಗತಿಯನ್ನು ಕಂಡು ಆಶ್ಚರ್ಯಪಟ್ಟರು. ಈ ಕಲಿಕೆಯ ಯಶಸ್ಸಿಗೆ ಸಂಸ್ಕೃತ ಭಾರತೀಯಿಂದ ಬಂದ ಶ್ರೀ ನಾರಾಯಣ್, ಶ್ರೀಮತಿ ಶಾಂತಲಾ ಮೊದಲಾದ ಪರಿಣಿತ ಬೋಧಕರು ಕಲಿಸಲು ಅನುಸರಿಸುತ್ತಿದ್ದ ಸಂಸ್ಕೃತವನ್ನು ಸುಲಭವಾಗಿ ಗ್ರಹಿಸಲು ಸಾಧ್ಯವಾಯಿತು ಅವರು ಪಾತ್ಯಕ್ಷಿಕೆಯಲ್ಲಿ ಚಿತ್ರಪ್ರದರ್ಶನ, ಅಭಿನಯ ಕ್ರೀಡಾ ಮುಂತಾದ ವಿವಿಧ ಮಾಧ್ಯಮಗಳ ಮೂಲಕ ಕಲಿಸಿಕೊಟ್ಟರು.

ಸಂಸ್ಕೃತವನ್ನು ಈ ಮುನ್ನ ಕಲಿತವರಿಗಾಗಿ ವರ್ಗೀಕರಿಸಿದ ಗಣದಲ್ಲಿ ನಮ್ಮ ಕಾಲೇಜಿನಲ್ಲಿ ಸಾಹಿತ್ಯ ವಿದ್ವತ್ ತರಗತಿಗಳಲ್ಲಿ ವ್ಯಾಸಂಗಿಸುವ ಪ್ರೌಢವಿದ್ಯಾರ್ಥಿಗಳು ಸೇರಿದ್ದರು. ಅವರಿಗೆ ವಿಶೇಷವಾಗಿ ಭಾಷಾ ಅಧ್ಯಯನಕ್ಕೆ ಅವಶ್ಯವಾಗಿ ಬೇಕಾಗಿರುವ ವ್ಯಾಕರಣಾಂಶಗಳ್ನು ಬೋಧಿಸಲಾಯಿತು. ಹತ್ತು ದಿನಗಳಲ್ಲಿ ಅವರು ಸಂಸ್ಕೃತವನ್ನು ಸ್ವತಂತ್ರವಾಗಿ ಪ್ರಯೋಗಿಸುವ ಸಾಮರ್ಥ್ಯದ ಜೊತೆಗೆ ಕಥೆಯನ್ನು ಕಟ್ಟಿ ಹೇಳುವ ಸೃಜನ ಶಕ್ತಿಯನ್ನು ಗಳಿಸಿಕೊಂಡರು. ಬೆಂಗಳೂರು ನಗರದಿಂದ ಆಗಮಿಸಿದ್ದ ಸಂಸ್ಕೃತ ವಿದ್ವಾಂಸರಾದ ಶ್ರೀ ಪ್ರಭುಲಿಂಗ, ಶ್ರೀ ನಾರಾಯಣ ಭಟ್ ಮುಂತಾದವರು ಈ ಬೋಧನೆಯಲ್ಲಿ ಸಹಕರಿಸಿದರು. ೭೫ ಮಂದಿ ಪ್ರೌಢ ವಿದ್ಯಾರ್ಥಿಗಳು ಭಾಗವಹಿಸಿದ್ದರು.








ಸಮಾರೋಪ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರಿಂದ ಅನುಗ್ರಹ ಭಾಷಣ

ಸಿದ್ಧಗಂಗಾ ವಿದ್ಯಾಸಂಸ್ಥೆಯ ವತಿಯಿಂದ ನಡೆಯವ ಗ್ರಾಮಾಂತರ ಪ್ರದೇಶಗಳಲ್ಲಿನ ಸಂಸ್ಕೃತ ಪ್ರೌಢಶಾಲೆಗಳಿಂದ ಬಂದಂತಹ ಅಧ್ಯಾಪಕರುಗಳು ಮೂರನೆಯಗಣದಲ್ಲಿದ್ದರು. ಕಾರ್ಯಕ್ರಮದ ಪ್ರಯೋಜನ ಪಡೆದವರಲ್ಲಿ ಸಿಂಹಪಾಲು ಇವರದಾಗಿತ್ತು. ವಿಶೇಷವಾಗಿ ಇವರಿಗೆ ವ್ಯಾಕರಣಾದಿ ಅಂಶಗಳನ್ನು ಕಲಿಸುವುದರ ಜೊತೆಗೆ ಆಧುನಿಕ ಶಿಕ್ಷಣ ಪದ್ಧತಿಯನ್ನು ಅನುಸರಿಸಿ ಪಾಠಮಾಡುವ ಕ್ರಮವನ್ನು ಪರಿಣತರಿಂದ ಬೋಧಿಸಲಾಯಿತು. ಈ ಅಧ್ಯಾಪಕರುಗಳಿಗೆ ಕಲಿಕೆಯಲ್ಲಿ ಮಕ್ಕಳನ್ನು ಪ್ರಚೋದಿಸುವ, ಪ್ರವರ್ತಿಸುವ, ಪ್ರೇರೇಪಿಸುವ ಬೋಧನಾ ಕಲೆಯನ್ನು ಕಲಿಸಿಕೊಡಲಾಯಿತು. ಹೇಗೆ ಮಕ್ಕಳನ್ನು ಪ್ರಶ್ನಿಸಬೇಕು, ಯಾವ ಯಾವ ತಂತ್ರಗಳನ್ನು ಬಳಸಿ ವಿಷಯವನ್ನು ಮಕ್ಕಳ ಮನಸ್ಸಿಗೆ ನಾಟುವಂತೆ ಮಾಡಬೇಕು ಮುಂತಾದ ಬೋಧನಾತಂತ್ರಗಳನ್ನು ತಿಳಿಸಲಾಯಿತು. ಒಟ್ಟಿನಲ್ಲಿ ಒಬ್ಬ ಉತ್ತಮ ಆದರ್ಶ ಶಿಕ್ಷಕನಾಗಿ ಹೇಗೆ ರೂಪಿಗೊಳ್ಳ ಬೇಕೆಂಬುದನ್ನು ಈ ಶಿಬಿರವು ಸಾದರಪಡಿಸಿತು. ಈ ಪ್ರಶಿಕ್ಷಕ ವರ್ಗದಲ್ಲಿ ೭೦ ಮಂದಿ ಅಧ್ಯಾಪಕರು ಪಾಲ್ಗೊಂಡಿದ್ದರು.

ಈ ಕಾರ್ಯಕ್ರಮದಲ್ಲಿ ಅನೇಕ ವಿಶೇಷ ಉಪನ್ಯಾಸಗಳನ್ನು ಆಯೋಜಿಸಲಾಗಿತ್ತು. ವಿಶೇಷವಾಗಿ ವೇದಗಣಿತ ಸಂಸ್ಥೆಯ ನಿರ್ದೇಶಕರಾದ ಶ್ರೀ ಎಸ್.ಎನ್. ಪಡಿಯಾರ್ ಅವರು ವೇದಗಣಿತದ ಬಗ್ಗೆ ಮಾಡಿದ ಉಪನ್ಯಾಸ ಅದ್ಭುತವಾಗಿತ್ತು. ಹತ್ತುದಿನಗಳಲ್ಲಿ ಸಂಸ್ಕೃತ ಭಾಷೆಯನ್ನು ಮಾತನಾಡುವಂತೆ ಕಲಿಸಿದ್ದು ಒಂದು ಪವಾಡ ಸದೃಶವಾಗಿತ್ತು ಎಂಬುದು ಅನೇಕರ ಅಭಿಪ್ರಾಯವಾಗಿದೆ. ಒಟ್ಟಿನಲ್ಲಿ ಶ್ರೀಕ್ಷೇತ್ರದ ಸಂಸ್ಕೃತ ಮಹಾವಿದ್ಯಾಲಯದ ವತಿಯಿಂದ ನಡೆದ ಸಂಸ್ಕೃತ ಪರವಾದ ಕಾರ್ಯಕ್ರಮಗಳಲ್ಲಿ ಇದು ದಾಖಲಿಸುವಂತಹ ಕಾರ್ಯಕ್ರಮವಾಗಿದೆ.

ಅಕ್ಟೋಬರ್ ೧೩ರಂದು ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಸಮಾರೋಪ ಸಮಾರಂಭ ಜರುಗಿತು. 'ಸಂಸ್ಕೃತ ಸಂದೇಶ' ಪತ್ರಿಕೆಯ ಸಂಪಾದಕರಾದ ಡಾ. ವಿಶ್ವಾಸ್ ಅವರು ಸಮಾರೋಪ ಭಾಷಣ ಮಾಡಿದರು. ಸಂಸ್ಕೃತ ಭಾಷೆಯ ವಿಶ್ವಮಾನ್ಯತೆಯನ್ನೂ ಹಾಗೂ ನಮ್ಮ ದೇಶದಲ್ಲಿ ಅದಕ್ಕೆ ಬಂದೊದಗಿರುವ ಹೀನ ಸ್ಥಿತಿಯನ್ನೂ ಉದಾಹರಣೆಗಳ ಮುಖಾಂತರ ಸಾದರಪಡಿಸಿದರು. ಪರಮಪೂಜ್ಯರು ಆಶೀರ್ವಚನ ನೀಡುತ್ತಾ ಸಂಸ್ಕೃತ ಭಾಷೆಯ ಮಹತ್ವವನ್ನು ಹಾಗೂ ಅದು ಜಗತ್ತಿಗೆ ಕೊಟ್ಟ ಮಹಾನ್ ಕೊಡುಗೆಯನ್ನು ತಿಳಿಸಿಕೊಟ್ಟರು.

ವರದಿ : ವಿದ್ವಾನ್ ಕೆ. ಬಸವರಾಜು



ಶಿಬಿರಾರ್ಥಿಗಳು ಮತ್ತು ಗಣ್ಯರು




ಶ್ರೀಮನ್ನಿರಂಜನ ಪ್ರಣವಸ್ವರೂಪಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವಾಹನ ಚಾಲಕರಾಗಿ ೪೦ ವರ್ಷಗಳ ಕಾಲ ಸಲ್ಲಿಸಿದ ಸುದೀರ್ಘ ಸೇವೆಯನ್ನು ಸ್ಮರಿಸಿ ತುಮಕೂರಿನ ರೋಟರಿ ಪರವಾಗಿ ಶ್ರೀ ಕೋರಿ ಮಂಜುನಾಥ್ ಅವರು ಶಾಲುಹೊದಿಸಿ ನೆನಪಿನ ಕಾಣಿಕೆ ನೀಡಿ ಸನ್ಮಾನಿಸಿದರು.
ಈ ಸಂದರ್ಭದಲ್ಲಿ ತುಮಕೂರು ರೋಟರಿ ಅಧ್ಯಕ್ಷರಾದ ಶ್ರೀ ಕೆ.ಎಸ್. ವಿಶ್ವೇಶ್ವರ್ ಅವರು ಉಪಸ್ಥಿತರಿದ್ದರು.

## ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘ

ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ.

### ನಲವತ್ತೇಳನೇ ಸರ್ವಸದಸ್ಯರ ವಾರ್ಷಿಕ ಮಹಾಧಿವೇಶನ

ಶ್ರೀ ಸಿದ್ಧಗಂಗಾ ಮಠದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘದ ೪೭ನೇ ಸರ್ವಸದಸ್ಯರ ವಾರ್ಷಿಕ ಮಹಾಧಿವೇಶನವು ಡಿಸೆಂಬರ್ ೧೬, ೨೦೦೧ರ ಭಾನುವಾರ ಬೆಳಿಗ್ಗೆ ೧೦-೩೦ ಘಂಟೆಗೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದ ಆವರಣದಲ್ಲಿ ಏರ್ಪಡಿಸಿದೆ. ತಾವು ದಯವಿಟ್ಟು ಸಕಾಲಕ್ಕೆ ಆಗಮಿಸಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಬೇಕಾಗಿ ಬಿನ್ನವಿಸುಕೊಳ್ಳುತ್ತೇವೆ.

ದಿನಾಂಕ : ೧೨-೧೧-೨೦೦೧
ಸ್ಥಳ : ಸಿದ್ಧಗಂಗಾ ಮಠ

ಡಾ. ಎಂ.ಎಸ್. ಚನ್ನಬಸಪ್ಪ
ಪ್ರಧಾನ ಕಾರ್ಯದರ್ಶಿ

ವಿ.ಸೂ. : ತಾವು ಸಭೆಗೆ ಆಗಮಿಸುವಾಗ ಶ್ರೀಮಠದ ವಿದ್ಯಾರ್ಥಿಗಳಾಗಿದ್ದು ಇದುವರೆಗೂ ಸಂಘದ ಸದಸ್ಯರಾಗಿ ಹೆಸರನ್ನು ನೋಂದಾಯಿಸಿಕೊಳ್ಳದ ಮಿತ್ರರನ್ನು ಜೊತೆಯಲ್ಲಿ ಕರೆದುಕೊಂಡು ಬರಬೇಕಾಗಿ ವಿನಂತಿ.

### ಶ್ರೀವಾಣಿ

*ತಾಂತ್ರಿಕ ಜ್ಞಾನದ ಪ್ರಗತಿಯನ್ನಿಂದು ಮಾನವೀಯ ಮೌಲ್ಯಗಳಿಗೆ ಧಕ್ಕೆಯಾಗದ ರೀತಿಯಲ್ಲಿ ನೋಡಿಕೊಳ್ಳಬೇಕಾಗಿದೆ. ಜೀವನಾತ್ಮಕ ದೃಷ್ಟಿ ಬದಲಾಗಿ ಜೀವಕಲ್ಯಾಣ ದೃಷ್ಟಿ ವೃದ್ಧಿಸುವಂತೆ ಎಚ್ಚರವಹಿಸಬೇಕಾಗಿದೆ.*





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೪೮೨. | ಶ್ರೀ ವಿ.ಎಂ. ಪರಮೇಶ್ವರಯ್ಯ<br>ಶ್ರೀ ನಂಜುಡೇಶ್ವರ ನಿಲಯ, ನಂ. ೧೨೦<br>೩ನೇ ಸ್ಟೇಜ್, ೪ನೇ ಬ್ಲಾಕ್, ಬಸವೇಶ್ವರನಗರ<br>ಬೆಂಗಳೂರು – ೫೬೦ ೦೭೯.<br>(ಶ್ರೀ ಲಿಂ. ಮೋಹನಕುಮಾರ್ - ಇವರ ಸ್ಮರಣಾರ್ಥ ದಾಸೋಹ ನಿಧಿಗೆ) | ೩,೦೦೧.೦೦ |
| ೪೮೩. | ಶ್ರೀ ಎಂ.ಎಸ್. ಚಂದ್ರಶೇಖರ್<br>ಅಸಿಸ್ಟೆಂಟ್ ಎಕ್ಸಿಕ್ಯೂಟೀವ್ ಇಂಜಿನಿಯರ್<br>ಟೂಡಾ<br>ತುಮಕೂರು | ೩,೦೦೦.೦೦ |
| ೪೮೪. | ಶ್ರೀಮತಿ ಸುಶೀಲ<br>ಮೆಟ್ರೋಪಾಲಿಟನ್ ಮ್ಯಾಜಿಸ್ಟ್ರೇಟ್<br>ಸಿಟಿ ಸಿವಿಲ್ ಕೋರ್ಟ್ ಬಿಲ್ಡಿಂಗ್<br>ಬೆಂಗಳೂರು – ೫೬೦ ೦೦೧. | ೧,೦೦೧.೦೦<br>(೧ನೇ ಕಂತು) |
| ೪೮೫. | ಶ್ರೀ ರಂಗಹನುಮಯ್ಯ<br>ಪ್ರಧಾನ ವ್ಯವಸ್ಥಾಪಕರು<br>ನಂ. ೧೫೨, ಜೆ.ಬಿ. ಇಂಡಸ್ಟ್ರೀಯಲ್<br>ಕೆಲಸಗಾರರ ಬಡಾವಣೆ, ೬೦ ಅಡಿ ರಸ್ತೆ<br>ಶಂಕರ್‌ನಗರ, ನಂದಿನಿ ಬಡಾವಣೆ ಅಂಚೆ<br>ಬೆಂಗಳೂರು – ೫೬೦ ೦೯೬. | ೨,೧೦೧.೦೦ |
| ೪೮೬. | ಶ್ರೀ ಶಿವಣ್ಣ ಶ್ರೀಮತಿ ಶಿವಮ್ಮ ಮತ್ತು ಕುಟುಂಬ ವರ್ಗ<br>ದಾಸೇನಹಳ್ಳಿ, ನಿಡವಂದ ಅಂಚೆ<br>ನೆಲಮಂಗಲ ತಾಲ್ಲೂಕು<br>ಬೆಂಗಳೂರು ಗ್ರಾಮಾಂತರ ಜಿಲ್ಲೆ | ೨,೫೦೧.೦೦ |
| ೪೮೭. | ಶ್ರೀ ಎಸ್.ಬಿ. ಶಿವಕುಮಾರಯ್ಯ<br>ನಂ. ೮, ೧ನೇ ಮುಖ್ಯರಸ್ತೆ, ೧ನೇ ಹಂತ<br>ಅರಕೆರೆ, ಮೈಕೋ ಬಡಾವಣೆ<br>ಬನ್ನೇರುಘಟ್ಟ ರಸ್ತೆ,<br>ಬೆಂಗಳೂರು – ೫೬೦ ೦೭೬. | ೨,೧೦೧.೦೦ |
| ೪೮೮. | ಶ್ರೀ ಲಿಂಗಪ್ಪ<br>ಶಾಂತಿನಿಲಯ, ೬ನೇ ಕ್ರಾಸ್, ೨ನೇ ಮುಖ್ಯರಸ್ತೆ<br>ವಿಜಯನಗರ<br>ತುಮಕೂರು – ೨. | ೨,೧೦೧.೦೦ |
| ೪೮೯. | ಶ್ರೀ ಹೆಚ್.ಬಿ. ಹೊನ್ನಯ್ಯ<br>ನಂ. ೬೭, ೧ನೇ ಮಹಡಿ, ೩೬ನೇ ಎ ಕ್ರಾಸ್<br>೯ನೇ ಬ್ಲಾಕ್, ಜಯನಗರ<br>ಬೆಂಗಳೂರು – ೫೬೦ ೦೬೯. | ೨,೧೦೧.೦೦ |
| ೪೯೦. | ಶ್ರೀ ವಿ. ಸೋಮಶೇಖರಯ್ಯ,<br>ಬಿನ್ ವೀರಣ್ಣ (ಕಂಬಾಳು)<br>ನಂ. ೨೭೫, ಮಹದೇಶ್ವರ ನಗರ,<br>ವಿಶ್ವನೀಡಂ ಅಂಚೆ, ಮಾಗಡಿ ಮುಖ್ಯರಸ್ತೆ,<br>ಬೆಂಗಳೂರು – ೫೬೦ ೦೯೧. | ೨,೧೦೧.೦೦ |
| ೪೯೧. | ಶ್ರೀ ವಿ. ಶಿವರುದ್ರಯ್ಯ<br>ಬಿನ್ ವೀರಣ್ಣ, (ಕಂಬಾಳು)<br>ಶಿವಕೃಪ, ನಂ. ೧೨೦, ಸತ್ಯನಾರಾಯಣ ಬಡಾವಣೆ<br>ಮಹಾಲಕ್ಷ್ಮಿಪುರಂ,<br>ಬೆಂಗಳೂರು – ೫೬೦ ೦೮೬. | ೨,೦೦೧.೦೦ |
| ೪೯೨. | ಶ್ರೀಮತಿ ವಿಜಯಲಕ್ಷ್ಮಿ ಭಾನಿ<br>ಪ್ರೊಪ್ರೈಟರ್, ಅವೆಸೊಮೆ ಅಪರೆಲ್ಸ್ ಪ್ರೈ. ಲಿ.<br>ನಂ. ೪೮/೪ ಮತ್ತು ೯, ಕರಿವಬನಹಳ್ಳಿ<br>ಬೆಂಗಳೂರು ಉತ್ತರ, ಪೀಣ್ಯ ೨ನೇ ಹಂತ<br>ಬೆಂಗಳೂರು ೫೬೦ ೦೫೮. | ೨೫,೦೦೧.೦೦ |
| ೪೯೩. | ಶ್ರೀಮತಿ ಹೆಚ್.ಎಸ್. ಸಿದ್ದಗಂಗಮ್ಮ<br>ಮುಖ್ಯಸ್ಥರು, ಸೋಸಿಯಾಲಜಿ ವಿಭಾಗ,<br>ಸಿದ್ಧಗಂಗಾ ಮಹಿಳಾ ಕಾಲೇಜು<br>ಬಿ.ಹೆಚ್. ರಸ್ತೆ, ತುಮಕೂರು. | ೨,೦೦೧.೦೦<br>(೩ನೇ ಕಂತು) |
| ೪೯೪. | ಶ್ರೀ ಎಸ್.ಬಿ. ಶಶಿಧರಯ್ಯ<br>ಮುಖ್ಯಸ್ಥರು, ಕೆಮಿಸ್ಟ್ರಿ<br>ಸಿದ್ಧಗಂಗಾ ಮಹಿಳಾ ಕಾಲೇಜು<br>ಬಿ.ಹೆಚ್. ರಸ್ತೆ, ತುಮಕೂರು. | ೧,೦೦೧.೦೦<br>(೨ನೇ ಕಂತು) |
| ೪೯೫. | ನಿವೃತ್ತ ಮುಖ್ಯ ಶಿಕ್ಷಕರುಗಳು ಮತ್ತು ಸಿಬ್ಬಂದಿ ವರ್ಗ<br>ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ<br>ಶ್ರೀ ಸಿದ್ಧಗಂಗಾ ಮಠ. | ೯,೬೦೦.೦೦ |

(ಮುಂದುವರಿಯುತ್ತದೆ)

# ವಿಶ್ವಶಾಂತಿಗೆ ಧರ್ಮಗುರುಗಳ ಸಂದೇಶ

''ಜೀವನ ಆಧ್ಯಾತ್ಮೀಕರಣವಾಗಬೇಕು. ವಿಜ್ಞಾನ ಬೇಕು. ಆದರೆ ಅದು ಶಿಸ್ತು ಬದ್ಧವಾಗಿರಬೇಕು. ಭಾರತದ ಸಂದೇಶ ಪ್ರತಿಯೊಬ್ಬರೂ ಆಧ್ಯಾತ್ಮಿಕತೆಯನ್ನು ಬೆಳೆಸಿಕೊಳ್ಳಬೇಕು. ಅಂತರಂಗ-ಬಹಿರಂಗ ಎರಡರಲ್ಲೂ ಸಾಮರಸ್ಯವಿರಬೇಕು. ಪ್ರಸ್ತುತ ಬುಗಿಲೆದ್ದಿರುವ ಅನಿಷ್ಟ ವಾತಾವರಣಕ್ಕೆ ಜನಗಳಲ್ಲಿ ಧರ್ಮದ ಬಗ್ಗೆ ಅರ್ಥಮಾಡಿಕೊಳ್ಳದಿರುವುದು ಆಗಿದೆ' ಎಂದು ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ತ್ರಿವಿಧ ದಾಸೋಹಮೂರ್ತಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ನುಡಿದರು.

ಅವರು ಅಕ್ಟೋಬರ್ ೨೧ರಂದು ಬೆಂಗಳೂರಿನ ಸದಾಶಯ ಸಂಗಮ ಏರ್ಪಡಿಸಿದ್ದ ಸೌಹಾರ್ದ ಸಮ್ಮಿಲನ ಸಮಾರಂಭದ ದಿವ್ಯ ಸಾನ್ನಿಧ್ಯವಹಿಸಿ ಆಶೀರ್ವಚನ ನೀಡಿದರು.

ಯಾರು ಧರ್ಮವನ್ನೂ ಬಲ್ಲವರಾಗಿಲ್ಲವೋ ಅವರಲ್ಲಿ ಕ್ಷುದ್ರತೆ ಅಮಂಗಲ ತುಂಬಿರುತ್ತದೆ ಎಂದು ವಿಷಾದವನ್ನು ವ್ಯಕ್ತಪಡಿಸಿದ ಶ್ರೀಗಳವರು ಭಾರತೀಯ ಸಂಸ್ಕೃತಿ ಪುರಾತನವಾದುದು. ಭರತಖಂಡ ಭಾರತೀಯ ನಾಗರಿಕತೆಯ ಉಗಮ ಸ್ಥಾನ. ಅದರಿಂದ ಭರತ ಖಂಡದ ಜವಾಬ್ದಾರಿ ಹೆಚ್ಚಿನದಾಗಿದೆ. ಜಗತ್ತಿನ ಸಲುವಾಗಿ ಶ್ರಮಿಸಬೇಕಾಗಿದೆ. ವಿಶ್ವಶಾಂತಿ ಆಗಬೇಕಾಗಿದೆ, ರವೀಂದ್ರರು ಹೇಳಿರುವಂತೆ ಇಡೀ ಭವಿಷ್ಯವನ್ನು ರೂಪಿಸುವ ಕಾರ್ಯವನ್ನು ಭರತಖಂಡ ಮಾಡಬೇಕಾಗಿದೆ ಎಂದು ತಿಳಿಸಿದರು.

ಸಮಾವೇಶದ ಬಗ್ಗೆ ಮೆಚ್ಚುಗೆಯನ್ನು ವ್ಯಕ್ತಪಡಿಸಿದ ಶ್ರೀಶ್ರೀಗಳವರು ಇಂದಿನ ಸಮಾವೇಶ ಅಪೂರ್ವ ಹಾಗೂ ಅರ್ಥಪೂರ್ಣವಾಗಿದೆ. ಸೆಪ್ಟಂಬರ್ ೧೭ರಂದು ಅಮೇರಿಕದಲ್ಲಿ ನಡೆದ ಘಟನೆಯಿಂದ ನಾಗರಿಕರು ತಲೆ ತಗ್ಗಿಸುವಂತಾಗಿದೆ. ಇದರಿಂದ ವಿಶ್ವದಲ್ಲಿ ಶಾಂತಿಯ ಬಿರುಗಾಳಿ ಬೀಸುತ್ತಿದೆ. ಜಗತ್ತಿಗೆ ನೆಮ್ಮದಿಬೇಕು, ಶಾಂತಿಬೇಕು. ಮಾನವ ಕಲ್ಯಾಣವಾಗಬೇಕು ಎಂಬುದು ಭಾರತೀಯ ಸಂಸ್ಕೃತಿಯ ಸಂದೇಶ ವ್ಯಾಪಕವಾಗಲಿ ಮಾನವ ಕಲ್ಯಾಣವಾಗಲಿ ಎಂದು ತಿಳಿಸಿದರು.

'ನುಡಿ ದೀವಿಗೆ' ಕೃತಿಯನ್ನು ಬಿಡುಗಡೆ ಮಾಡಿ ಆಶೀರ್ವಚನ ನೀಡಿದ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಪ್ರಾರ್ಥನೆ ಮಾಡುವುದು ವ್ಯಕ್ತಿಗತವಾದರೂ, ಅದರ ಫಲ ಇಡೀ ಸಮುದಾಯಕ್ಕೆ ದೊರೆಯುವಂತಾಗಬೇಕು. ಜಗತ್ತಿನ ಕಲ್ಯಾಣಕ್ಕಾಗಿ ಪ್ರಾರ್ಥನೆ ಮಾಡಬೇಕೆಂದು ಹಿರಿಯರು ಹೇಳುತ್ತಾ ಬಂದಿದ್ದಾರೆ. ಪ್ರಸ್ತುತ ವಿಶ್ವವನ್ನು ತಲ್ಲಣಗೊಳಿಸುತ್ತಿರುವ ಭಯೋತ್ಪಾದನೆ ನಿರ್ಮೂಲನೆ ಆಗಬೇಕು. ದಾರ್ಶನಿಕರ ಮಾತುಗಳನ್ನು ಮನನ ಮಾಡಿಕೊಂಡು ಅರ್ಥಪೂರ್ಣವಾಗಿ ಆಚರಣೆಗೆ ತರುವಂತಾಗಬೇಕು' ಎಂದು ತಿಳಿಸಿದರು.



ಸಮಾರಂಭ ನಡೆಯುವ ವೇದಿಕೆಗೆ ವಿವಿಧ ಧರ್ಮಗುರುಗಳು ಹಾಗೂ ಗಣ್ಯರನ್ನು ಬರಮಾಡಿಕೊಳ್ಳುತ್ತಿರುವುದು.





SADASHAYA SANGAMA
SAUHARDHA SAMMEELANA

RESOLUTION TO BE SENT TO U.N.O.
Date : 21-10-2001 Bangalore, Karnataka, INDIA.

The World Peace is The Need Of The Day. Terrorism Should Vanish. Peace & Harmony Should Prevail. India Always Stands For Universal Brotherhood. This Forum Supports The U.N.O. In Its Efforts To Maintain Peace And Harmony in The World.

ವಿಶ್ವಶಾಂತಿ ಸೌಹಾರ್ದತೆ ಬಗ್ಗೆ ಗೊತ್ತುವಳಿಗಳನ್ನು ಅಂಗೀಕರಿಸಿ ಈ ನಿರ್ಣಯಕ್ಕೆ ಸಮಾರಂಭದಲ್ಲಿ ಭಾಗವಹಿಸಿದ ಎಲ್ಲ ಧರ್ಮಗುರುಗಳು, ಗಣ್ಯರು ಸಹಿ ಹಾಕಿರುವುದು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠದ ಜಗದ್ಗುರು ಶ್ರೀ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳು ಮಾತನಾಡಿ ''ವಿಶ್ವಕ್ಕೆ ಶಾಂತಿ ಬೇಕಾಗಿದೆ. ಯುದ್ಧ ಭೀತಿ ಎಲ್ಲರ ಮನಸ್ಸಿನಲ್ಲಿ ಭಯವನ್ನು ಮೂಡಿಸಿದೆ. ಹಿಂಸೆಯಿಂದ ಶಾಂತಿ ಸಿಗುವುದಿಲ್ಲ. ಶಾಂತಿಯ ಸಂದೇಶ ಇಂದು ವಿಶ್ವದ ಎಲ್ಲ ಕಡೆಗೆ ತಲುಪಬೇಕಾಗಿದೆ. ಯುದ್ಧಗಳು ಹೆಚ್ಚು ಕಾಲ ಮುಂದುವರಿಯದ ಹಾಗೆ ವಿಶ್ವದಲ್ಲಿರುವ ಎಲ್ಲ ಧರ್ಮಗುರುಗಳು ಪ್ರಯತ್ನಿಸಬೇಕು. ವಿಶ್ವವನ್ನು ಕಾಪಾಡುವ ಭಾಗ್ಯವನ್ನು ಪರಮಾತ್ಮ ಕೊಡಲಿ'' ಎಂದು ಹಾರೈಸಿದರು.

ಸಮಾರಂಭದಲ್ಲಿ ಸರ್ವಧರ್ಮಗಳ ಗುರುಗಳು ಹಾಗೂ ಗಣ್ಯರು ಭಾಗವಹಿಸಿ, ವಿಶ್ವದ ಶಾಂತಿ ಸೌಹಾರ್ದತೆ ಬಗ್ಗೆ ಗೊತ್ತುವಳಿಯನ್ನು ಅಂಗೀಕರಸಿ ಅದನ್ನು ವಿಶ್ವಸಂಸ್ಥೆಗೆ ಕಳುಹಿಸಿಕೊಡಲು ನಿರ್ಧರಿಸಿದರು.

**ಗೊತ್ತುವಳಿ**

''ಭಯೋತ್ಪಾನೆ ನಿರ್ಮೂಲವಾಗಿ ವಿಶ್ವದ ಶಾಂತಿ ನೆಲೆಸುವಂತಾಗುವುದು ಇಂದಿನ ಅವಶ್ಯಕತೆಯಾಗಿದೆ. ಶಾಂತಿ ಮತ್ತು ಸೌಹಾರ್ದತೆ ಮಾತ್ರ ನೆಲೆಯಾಗಿ ನಿಲ್ಲಬೇಕು. ಭಾರತ ವಿಶ್ವಸೋದರತ್ವಕ್ಕೆ ಬದ್ಧವಾಗಿದೆ. ಪ್ರಪಂಚದಲ್ಲಿ ಶಾಂತಿ ಮತ್ತು ಸೌಹಾರ್ದತೆಯನ್ನು ಕಾಯ್ದುಕೊಳ್ಳುವ ವಿಶ್ವಸಂಸ್ಥೆಯ ಪ್ರಯತ್ನವನ್ನು ಈ ವೇದಿಕೆ ಬೆಂಬಲಿಸುತ್ತದೆ'' ಎಂಬ ನಿರ್ಣಯವನ್ನು ಅಂಗೀಕರಿಸಲಾಯಿತು. ಈ ನಿರ್ಣಯಕ್ಕೆ ವೇದಿಕೆಯ ಮೇಲಿದ್ದ ಎಲ್ಲ ಧರ್ಮಗುರುಗಳು, ಗಣ್ಯರು ಸಹಿ ಹಾಕಿದರು.

ಸಮಾರಂಭದಲ್ಲಿ ಮಾತನಾಡಿದ ಎಲ್ಲರೂ ಶಾಂತಿ ಸ್ಥಾಪನೆಯ ಅಗತ್ಯವನ್ನು ಒತ್ತಿ ಹೇಳಿ ''ದ್ವೇಷ, ಅಸೂಯೆ ಮತಾಂಧತೆಗಳಿಂದ ಜಗತ್ತು ಇಂದು ವಿಪತ್ತಿನ ಅಂಚಿನಲ್ಲಿದ್ದು ವಿಶ್ವಶಾಂತಿ ಸಂದೇಶವನ್ನು ಸಾರಲು ಭಾರತ ಮುಂದಾಗಬೇಕು. ಧರ್ಮ ಮನುಕುಲವನ್ನು ಬೆಸೆಯುವ ಸಾಧನವಾಗಬೇಕೇ ವಿನಃ ಒಡೆಯುವ ಸಾಧನವಾಗಬಾರದು, ಮನುಕುಲವನ್ನು ಬೆಸೆಯುವ ಎಲ್ಲ ಧರ್ಮಗಳ ಮೂಲ ಉದ್ದೇಶ ಎಂಬುದನ್ನು ಎಲ್ಲರೂ ಅರಿತುಕೊಳ್ಳುವಂತಾಗಬೇಕು'' ಎಂದು ಅಭಿಪ್ರಾಯಪಟ್ಟರು.

ಸಮಾರಂಭದಲ್ಲಿ ಸಿರಿಗೆರೆ ಜಗದ್ಗುರು ಡಾ. ಶ್ರೀ ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳು, ಉಡುಪಿ ಪುತ್ತಿಗೆ ಮಠದ ಶ್ರೀ ಶ್ರೀ ಸುಗುಣೇಂದ್ರತೀರ್ಥ ಸ್ವಾಮೀಜಿ, ಕನಕಗಿರಿ ಜೈನ ಮಠದ ಸ್ವಸ್ತಿಶ್ರೀ ಭುವನಕೀರ್ತಿ ಭಟ್ಟಾರಕ ಸ್ವಾಮಿಜೀ, ಆದಿಜಾಂಬವ ಮಠದ ಸಂಸ್ಥಾನದ ಶ್ರೀ ಶ್ರೀ ರುದ್ರಾಕ್ಷಿಮುನಿದೇಶಿಕೇಂದ್ರ ಸ್ವಾಮಿಜೀ, ಚಿನ್ಮೂಲಾದ್ರಿಶಿಲಾಪುರ ಮಠದ ಶ್ರೀ ಶ್ರೀ ಪುರುಷೋತ್ತಮಾನಂದ ಪುರಿ ಸ್ವಾಮೀಜಿ, ಜಾಗತಿಕ ಶಾಂತಿ ಪ್ರತಿಷ್ಠಾನದ ಶ್ರೀ ಷಹಾ ಖಾದ್ರಿ, ಸೈಯದ್ ಮುಸ್ತಾಫ ರಿಫಾಯಿ ಜಿಲಾನಿ, ಮಹಾಬೋಧಿ ಸಂಸ್ಥೆಯ ಶ್ರೀ ಭಿಕ್ಷು ಕಶ್ಯಫ್, ಮಂಡ್ಯದ ಸೆಂಟ್ ಜೋಸೆಫ್ ಚರ್ಚಿನ ಧರ್ಮಗುರು ರೆ. ಫಾದರ್ ಡೆನಿಸ್ ನರೋನಾ, ರಾಜಯೋಗಿನಿ ಬ್ರಹ್ಮಕುಮಾರಿ ಬಿ.ಕೆ. ಅಂಬಿಕಾಜಿ ಬ್ರಹ್ಮಕುಮಾರಿ ರತ್ನಾಜಿ, ಗುರುಸಿಂಗ್ ಸಭಾದ ಶ್ರೀ ಹರಜಿಂದರ್ ಸಿಂಗ್ ಭಾಟಿಯಾ ಅವರು ಭಾಗವಹಿಸಿದ್ದರು.

ಮುಖ್ಯ ಅತಿಥಿಗಳಾಗಿ ಮಾಜಿ ಉಪರಾಷ್ಟ್ರಪತಿ ಶ್ರೀ ಬಿ.ಡಿ. ಜತ್ತಿ, ನಿವೃತ್ತ ಮುಖ್ಯ ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾಯರು, ವಿಶ್ವವಿಖ್ಯಾತಿ ನೇತ್ರತಜ್ಞ ಡಾ. ಎಂ.ಸಿ. ಮೋದಿ, ಹೆಸರಾಂತ ಚಲನಚಿತ್ರ ನಿರ್ದೇಶಕ ಶ್ರೀ ಜಿ.ವಿ. ಅಯ್ಯರ್, ಸಂಗೀತ ವಿದ್ವಾಂಸರಾದ ಶ್ರೀ ಶೇಷಾದ್ರಿ ಗವಾಯಿ, ಮಾಜಿ ಶಾಸಕ ಪ್ರೊ. ಏಜಾಸುದ್ದೀನ್, ಗಾಂಧಿಸ್ಮಾರಕ ನಿಧಿಯ ಅಧ್ಯಕ್ಷ ಶ್ರೀ ಹೊ. ಶ್ರೀನಿವಾಸಯ್ಯ, ಜಮ್ಮು ಮತ್ತು ಕಾಶ್ಮೀರ ಹೈಕೋರ್ಟಿನ ನಿವೃತ್ತ ಮುಖ್ಯನ್ಯಾಯಮೂರ್ತಿ ಎಂ. ರಾಮಕೃಷ್ಣ ಅವರು ಭಾಗವಹಿಸಿದ್ದರು.

ಬೆಂಗಳೂರು ರಾಮಕೃಷ್ಣ ಯೋಗಾಶ್ರಮದ ಸ್ವಾಮಿ ಯೋಗಾಶ್ರಮದ ಸ್ವಾಮಿ ಯೋಗೇಶ್ವರನಂದಜಿ ಮಹಾರಾಜ್ ಮತ್ತು ಸಂಗಡಿಗರಿಂದ ವಿಶ್ವಶಾಂತಿ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಕನ್ನಡ ಅಭಿವೃದ್ಧಿ ಪ್ರಾಧಿಕಾರ ಕಾರ್ಯದರ್ಶಿ ಶ್ರೀ ಸಿ. ಸೋಮಶೇಖರ್ ಸ್ವಾಗತ ಮಾಡಿ ಕಾರ್ಯಕ್ರಮವನ್ನು ನಡೆಸಿಕೊಟ್ಟರು. ಮಾಜಿ ಸಚಿವರು, ವಿಧಾನಪರಿಷತ್ ಸದಸ್ಯರೂ ಆದ ಶ್ರೀ ಎಂ.ಪಿ. ಪ್ರಕಾಶ್ ಅವರು ಪ್ರಾಸ್ತಾವಿಕ ನುಡಿಗಳನ್ನಾಡಿ ಸಮಾರಂಭದ ಉದ್ದೇಶವನ್ನು ಸಭೆಗೆ ಪರಿಚಯ ಮಾಡಿಕೊಟ್ಟರು.

ವರದಿ : ಎಚ್.ಎಸ್. ಸಿದ್ಧಗಂಗಪ್ಪ

## ಸರ್ವರಿಗೂ ೪೬ನೇ ಕರ್ನಾಟಕ ರಾಜ್ಯೋತ್ಸವ ಶುಭಾಯಗಳು

ಬಾಂಧವ್ಯದ ಬೆಸುಗೆಯಾಗಿ, ಸಂಸ್ಕೃತಿಯ ಸೊಗಡಾಗಿ,
ಕಸ್ತೂರಿಯ ಕಂಪಾಗಿ, ಸಂಪತ್ತಿನ ಸೆಲೆಯಾಗಿ,
**ಮಾನವ ಕುಲಕೋಟಿಗೆ ಮಂಗಳ ಹರಸುವ,**
**ವೀಣಾಪಾಣಿಯ ವಾಣಿ – ಕನ್ನಡ ನುಡಿ ಕಾಣಿ.**

''ನಮ್ಮ ಚೆಲುವ ಕನ್ನಡನಾಡು ಉದಯಿಸಿ ಇಂದಿಗೆ ೪೫ ವರ್ಷಗಳು ಸಂದಿವೆ. ಕನ್ನಡಾಂಬೆಯ ಕೀರ್ತಿ ನಾಲ್ಕೂ ದಿಸೆಗಳಲ್ಲಿ ಪ್ರಸರಿಸುತ್ತಿರುವುದು ಹೆಮ್ಮೆಯ ವಿಷಯ. ಕರ್ನಾಟಕ ರಾಜ್ಯೋತ್ಸವದ ಈ ಶುಭದಿನದಂದು ಕರ್ನಾಟಕದ ಕುಲಕೋಟಿಗೆ ನನ್ನ ಹಾರ್ದಿಕ ಶುಭಾಶಯಗಳು.''

– ಎಸ್.ಎಂ. ಕೃಷ್ಣ
ಮುಖ್ಯಮಂತ್ರಿಗಳು

**ಕರ್ನಾಟಕದಲ್ಲಿ ಕನ್ನಡಕ್ಕೆ ಭದ್ರ ನೆಲೆಗಟ್ಟು**

**ಕನ್ನಡದ ಅಭಿವೃದ್ಧಿ ಪ್ರಾಧಿಕಾರದ ಸಲಹೆಗಳಿಗೆ ಆದ್ಯತೆ**

★ ೧ ರಿಂದ ೧೦ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದವರಿಗೆ ವೃತ್ತಿಶಿಕ್ಷಣದಲ್ಲಿ ಮೀಸಲಾತಿ ಇಡೀ ದೇಶಕ್ಕೆ ಮಾದರಿಯಾದ ಭಾಷಾ ನೀತಿ.
★ ಉದ್ಯೋಗದಲ್ಲಿ ಕನ್ನಡ ಮಾಧ್ಯಮದವರಿಗೆ ಮೀಸಲಾತಿ. ಕನ್ನಡ ಅಭಿಮಾನಕ್ಕೆ ಹೊಸ ಆಯಾಮ.
★ ಕನ್ನಡೇತರ ಶಾಲೆಗಳಲ್ಲಿ ಮೂರನೇ ತರಗತಿಯಿಂದ ಕನ್ನಡ ಕಡ್ಡಾಯ, ಪೂರ್ಣಾವಧಿ ಕನ್ನಡ ಅಧ್ಯಾಪಕರ ನೇಮಕ.
★ ಆಡಳಿತದಲ್ಲಿ ಕನ್ನಡದ ಅನುಷ್ಠಾನ ಮಾಡದೆ ಇರುವ ಅಧಿಕಾರಿಗಳ ವಿರುದ್ಧ ಶಿಸ್ತುಕ್ರಮ.
★ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಪ್ರತ್ಯೇಕ ಕನ್ನಡ ಅನುಷ್ಠಾನದ ವಿಭಾಗ ಆರಂಭಕ್ಕೆ ಐತಿಹಾಸಿಕ ಆದೇಶ.
★ ಕೃಷಿ ವಿಶ್ವವಿದ್ಯಾಲಯದಲ್ಲಿ ಕನ್ನಡ ಮಾಧ್ಯಮ ಆರಂಭಕ್ಕೆ ತೀರ್ಮಾನ.
★ ಕಂಪ್ಯೂಟರ್‌ನಲ್ಲಿ ಕನ್ನಡದ ಅಳವಡಿಕೆಗೆ ಸಂಬಂಧಿಸಿದ ಸಂಶೋಧನೆ ಮತ್ತು ಅಭಿವೃದ್ಧಿಗೆ ಪ್ರತ್ಯೇಕ ಅನುದಾನ.
★ ಪದವಿಪೂರ್ವ ಶಿಕ್ಷಣದಲ್ಲಿ ಐಚ್ಛಿಕ ಕನ್ನಡಕ್ಕೆ ಮುಕ್ತಾನುಮತಿ.
★ ಬಿ.ಇಡಿ ಪ್ರವೇಶ ಪರೀಕ್ಷೆಯಲ್ಲಿ ಕನ್ನಡಕ್ಕೆ ಸಮಾನ ಸ್ಥಾನ.
★ ವೃತ್ತಿ ಶಿಕ್ಷಣದಲ್ಲಿ ಅಗತ್ಯಕ್ಕನುಗುಣವಾಗಿ ಕನ್ನಡ ಪಠ್ಯ ಅಳವಡಿಸಲು ನಿರ್ಧಾರ.
★ ಗಡಿನಾಡು ಕನ್ನಡಿಗರ ಸಮಸ್ಯೆಗಳ ಅಧ್ಯಯನ ಹಾಗೂ ಪರಿಹಾರಕ್ಕೆ ಆದ್ಯತೆ.
★ ಪ್ರಾಥಮಿಕ ಶಿಕ್ಷಣ ಪೂರ್ಣವಾಗಿ ಕನ್ನಡ : ಮಾತೃಭಾಷಾ ಮಾಧ್ಯದಲ್ಲಿರಬೇಕೆಂಬ ತತ್ವಕ್ಕೆ ಬದ್ಧತೆ ಮತ್ತು ಅನುಷ್ಠಾನಕ್ಕೆ ಸಿದ್ಧತೆ.
★ ಕನ್ನಡ ಕಂಪ್ಯೂಟರ್ ಕೇಂದ್ರ ಸ್ಥಾಪನೆ.
★ ಕನ್ನಡ ಮಾಧ್ಯಮ ಪ್ರಶಸ್ತಿ ಸ್ಥಾಪನೆ.

ರಾಜ್ಯಭಾಷೆಯ ಅಭಿವೃದ್ಧಿಯ ಕೆಲಸಗಳಲ್ಲಿ ದೇಶದಲ್ಲೇ ಕರ್ನಾಟಕಕ್ಕೆ ಮೊದಲ ಸ್ಥಾನ,
ದೂರಗಾಮಿ ಕನ್ನಡ ಕೆಲಸಕ್ಕೆ ಆದ್ಯತೆ ಎಂದೆಂದು.

ಕರ್ನಾಟಕ ವಾರ್ತೆ

RNI No. 17139/69

"Siddaganga" Monthly - postal Reg.No. KA/SK/TMR/385/2001




ಅಕ್ಟೋಬರ್ ೨ರಂದು ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಮೂರನೇ ಅಲ್ಯೂಮಿನಿ ಮೀಟ್ (ಹಳೆಯ ವಿದ್ಯಾರ್ಥಿಗಳ ವಾರ್ಷಿಕ ಸಮಾವೇಶ) ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಿರುವುದು. ವೇದಿಕೆಯಲ್ಲಿ : ಮಾಜಿ ಸೆಷನ್ ನ್ಯಾಯಾಧೀಶರಾದ ಶ್ರೀ ಕೊ. ಚನ್ನಬಸಪ್ಪ, ತಾಂತ್ರಿಕ ಮಹಾವಿದ್ಯಾಲಯದ ಪ್ರಾಚಾರ್ಯ ಡಾ. ಎಂ.ಎನ್. ಚನ್ನಬಸಪ್ಪ ಹಾಗೂ ಹಳೆಯ ವಿದ್ಯಾರ್ಥಿ ಸಂಘದ ಕಾರ್ಯದರ್ಶಿ ಶ್ರೀ ಜಿ.ಎ. ಶಶಿಕುಮಾರ್ ಅವರನ್ನು ಕಾಣಬಹುದು.



ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು ಸಂಪಾದಿಸಿದ "ಟಿ.ಎನ್.ಎಂ. ಕವಿತೆಗಳ ಲೋಕದಲ್ಲಿ" ಗ್ರಂಥವನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಇತ್ತೀಚೆಗೆ ಬಿಡುಗಡೆ ಮಾಡಿದರು. ಈ ಸಂದರ್ಭದಲ್ಲಿ ಪ್ರೊ. ಬಿ. ವೀರಭದ್ರಯ್ಯ, ಪ್ರೊ. ಕೆ.ಜಿ. ನಾಗರಾಜಪ್ಪ, ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ, ಡಾ. ಎಸ್. ವಿದ್ಯಾಶಂಕರ್ ಹಾಗೂ ಪ್ರೊ. ಕೆ.ಎಲ್. ರಾಧಾಮಣಿ ಅವರು ಉಪಸ್ಥಿತರಿದ್ದರು.